# ಜಗದಾದಿ ನೇಕಾರ

# ಶ್ರೀ ದೇವಾಂಗ ದೇವಲ ಮಹರ್ಷಿ



ಶ. ಮಹಾದೇವ

## ಜಗದಾದಿ ನೇಕಾರ ಗುರು

# ಶ್ರೀ ದೇವಾಂಗ ದೇವಲ ಮಹರ್ಷಿ

### ಜಾನಪದ ಗಾಥೆ

ಲೇಖಕ

**ಶ.ಮಹಾದೇವ**

ಪ್ರಕಾಶನ

**ಶ. ಮಹಾದೇವ**

ನಂ. 8, ಅನೆಕಲ್ಲಪ್ಪ ಮಠದ ಗಲ್ಲಿ

ನಾರಾಯಣ ಶೆಟ್ಟಿ ಪೇಟೆ, ಬೆಂಗಳೂರು : 560 002

✆ 080-2222 7267, 88674 03022, 88618 90804

ಜಗದಾದಿ ನೇಕಾರ ಗುರು

ಶ್ರೀ ದೇವಾಂಗ ದೇವಲ ಮಹರ್ಷಿ

ಜಾನಪದ ಗಾಥೆ

ಲೇಖನ ಹಾಗೂ ಪ್ರಕಾಶನ:
**ಶ್ರೀ ಶ. ಮಹಾದೇವ**
ನಂ.8, ಆನೆಕಲ್ಲಪ್ಪ ಮಠದ ಗಲ್ಲಿ
ನಾರಾಯಣ ಶೆಟ್ಟಿ ಪೇಟೆ
ಬೆಂಗಳೂರು : 560 002
ಫೋ: 080–2222 7267
ಮೋ: 88674 03022, 88618 90804

ಪ್ರಥಮ ಆವೃತಿ : ಏಪ್ರಿಲ್ 2016

ಪ್ರತಿಗಳು : 500

ರೂ. 40/-



ಡಿಟಿಪಿ :
ಶ್ರೀ ಲಕ್ಷ್ಮೀ ಎಂಟರ್‌ಪ್ರೈಸಸ್
ಮೋ: 98862 55928

ಮುಖಪುಟ :
ರಾಜ್‌ಕುಮಾರ್
99450 91257

ಮುದ್ರಕರು :
ಶ್ರೀ ವೆಂಕಟೇಶ್ವರ ಪ್ರಿಂಟಿಂಗ್ ಪ್ರೆಸ್
ಐ.ಜಿ. ಸರ್ಕಲ್, ಜ.ಪಿ. ನಗರ 1ನೇ ಹಂತ
ಬೆಂಗಳೂರು : 560 078
ಫೋ: 080–2244 4763

# ಮನದ ಮೊದಲ ನಿವೇದನೆ

ಒಂದು ಸಮಾಜ ಅಥವಾ ಸಮುದಾಯ ಕಟ್ಟುವುದು ಎಂದರೆ ಕೇವಲ ಭೌತಿಕವಾದ ಇಟ್ಟಿಗೆ, ಸಿಮೆಂಟುಗಳಿಂದಾದ ಗೋಡೆ, ಕಿಟಕಿ, ಕಂಬಗಳು, ಕಮಾನುಗಳು, ಬಾಗಿಲುಗಳಿರುವ ಕಟ್ಟಡಗಳಿಂದಷ್ಟೇ ಆಗುವುದಿಲ್ಲ, ಭೌತಿಕವಾದ ಎತ್ತರದ ವಾಸ್ತು ಆಕೃತಿಗಳಿಂದಷ್ಟೆ ಕಟ್ಟಿದ ಅನೇಕ ಸಮಾಜಗಳು ಅಷ್ಟೇಕೆ ಅನೇಕ ಸಾಮ್ರಾಜ್ಯಗಳು ಅವನತಿಯಾಗಿ ಅನಂತರದ ದಿನಗಳಲ್ಲಿ ಅವಶೇಷಗಳು ಮಾತ್ರ ಪಳೆಯುಳಿಕೆಗಳಾಗಿ ಕಾಣಸಿಗುತ್ತವೆ. ಇತಿಹಾಸದಲ್ಲಿ ನಾವು ಅಂತಹ ಅನೇಕ ಉದಾಹರಣೆಗಳನ್ನು ನೋಡಬಹುದಾಗಿದೆ. ಯಾವುದೇ ಸಮಾಜ ಅಥವಾ ಸಮುದಾಯ ಇಂದು ಇನ್ನೂ ಸಾಂಸ್ಕೃತಿಕವಾಗಿ ಜೀವಂತಿಕೆ ಉಳಿಸಿಕೊಂಡಿದ್ದರೆ ಅದು ಆ ಸಮುದಾಯ ರೂಢಿಯಲ್ಲಿ ಆಯಾ ಧರ್ಮದ ಅನುಸಾರವಾಗಿ ಆಚರಿಸಿಕೊಂಡು ಉಳಿಸಿಕೊಂಡಿರುವ ಧಾರ್ಮಿಕ ಆಚರಣೆಗಳಿಂದ ಮಾತ್ರ ಎಂಬುದು ನಾವು ಮನಗಾಣಬೇಕು. ಧರ್ಮವನ್ನು ಉಳಿಸಿಕೊಳ್ಳಲಾರದ ಸಮಾಜವು ನಾಗರೀಕತೆ ಜೊತೆಗೆ ಸಂಸ್ಕೃತಿಯನ್ನು ಸಹ ಕಳೆದುಕೊಳ್ಳುತ್ತದೆ.

ಅಂದರೆ ಧರ್ಮವು ನಾಗರೀಕತೆ ಮತ್ತು ಸಂಸ್ಕೃತಿಗಳಿಗೆ ಮೂಲ ಆಧಾರ ಎಂಬುದನ್ನು ನಾವು ಅರ್ಥೈಸಿಕೊಳ್ಳಬಹುದಾಗಿದೆ. ಹಾಗಾದರೆ ಧರ್ಮ ಎಂದರೆ ಏನು ? ಧರ್ಮವು ಮಾನವನಿಗೆ ಏನನ್ನು ಕೊಡುತ್ತದೆ ? ಈ ಧರ್ಮವನ್ನೇ ಮೂಲವಾಗಿರಿಸಿಕೊಂಡಿರುವ ನಾಗರೀಕತೆ ಮತ್ತು ಸಂಸ್ಕೃತಿ ಎಂದರೆ ಏನು ? ಮತ್ತು ಇವು ನಮಗೆ ಏನನ್ನು ಕೊಡುತ್ತದೆ ? ಎಂಬ ಪ್ರಶ್ನೆ ಉತ್ಪನ್ನವಾಗುತ್ತದೆ. ಸನಾತನ ರೀತಿಯಲ್ಲಿ ಧರ್ಮ ಎಂದರೆ ಅಧ್ಯಾತ್ಮ ವಿದ್ಯೆ ಎಂದು ಹೇಳಬಹುದಾದರೂ ಇನ್ನೊಂದು ಅರ್ಥದಲ್ಲಿ ನಾನು ಅರ್ಥೈಸಿಕೊಂಡಿರುವಂತೆ ಧರ್ಮವೆಂದರೆ ಎಲ್ಲಾ ಕಾಲದಲ್ಲಿ, ಎಲ್ಲಾ ಸ್ಥಳಗಳಲ್ಲಿ ಎಲ್ಲ ಜನರಿಗೂ ಪ್ರಕೃತಿ (ಪ್ರಕೃತಿ = ಪ್ರ + ಕೃತ್ = ಮೊದಲು + ಮಾಡಿರುವುದು ಅಂದರೆ ಸೃಷ್ಟಿ)ಗೆ ಅನುಗುಣವಾಗಿ ಒಳಿತನ್ನು ಯಾವುದು ಹೇಳುತ್ತದೆಯೋ ಅದೇ ಧರ್ಮ.. ಈ ಧರ್ಮವು ಮಾನವನ ಪ್ರಗತಿಗಾಗಿ ಬಹಳ

ಮುಖ್ಯವಾಗಿ ಎರಡು ಸಂಗತಿಗಳನ್ನು ತಿಳಿಸುತ್ತದೆ. ಮೊದಲನೆಯದು ನಾಗರಿಕತೆ ಮತ್ತು ಎರಡನೆಯದು ಸಂಸ್ಕೃತಿ. ನಾಗರೀಕತೆಯು ಮಾನವನ ಬಾಹ್ಯ ಜೀವನ ಮಟ್ಟ ಸುಧಾರಣೆಗೆ ಸ್ವತ್ತು ಸಂಪತ್ತುಗಳು ಸ್ಥಿತಿಗತಿಗಳನ್ನು ವ್ಯವಹಾರ ಜ್ಞಾನ ಎತ್ತರಿಸುತ್ತದೆ. ಸಂಸ್ಕಾರ ಎಂದೂ ಹೇಳಬಹುದಾದ ಸಂಸ್ಕೃತಿಯು ಮಾನವನು ಸತ್ಯ, ಸಹನೆ, ಸಾಧನೆ ಇವುಗಳ ಅನುಷ್ಠಾನದ ಮೂಲಕ ಆಂತರಿಕ ಜ್ಞಾನವಾದ ಆತ್ಮಜ್ಞಾನ ಎತ್ತರಿಸುತ್ತದೆ.

ಇಲ್ಲಿ ವ್ಯವಹಾರ ಜ್ಞಾನ ಮತ್ತು ಆತ್ಮಜ್ಞಾನ ಅಥವಾ ಇನ್ನೊಂದು ರೀತಿಯಲ್ಲಿ ಹೇಳಬೇಕಾದರೆ ಲೌಕಿಕ ಜ್ಞಾನ ಮತ್ತು ಅಲೌಕಿಕ ಜ್ಞಾನ ಎರಡು ಬೇರೆ ಬೇರೆ ದಿಕ್ಕುಗಳಲ್ಲಿ ಗತಿಸುವುದಲ್ಲವೇ ಎಂಬ ಕುತೂಹಲ ಜಿಜ್ಞಾಸೆ ಮೂಡುವುದು ಸಹಜ. ಆದರೆ ಲೌಕಿಕ ವ್ಯವಹಾರವನ್ನು ಅಲೌಕಿಕ ಸಾಧನೆಗೆ ಒಳಪಡಿಸುವುದೇ ಧರ್ಮ, ಅರ್ಥ, ಕಾಮ, ಮೋಕ್ಷಗಳಾದ ಚತುರ್ವಿಧ ಪುರುಷಾರ್ಥಗಳು. ಧರ್ಮದ ತಳಹದಿಯ ಮೇಲೆ ಧರ್ಮವನ್ನೇ ಪ್ರಧಾನ ಮತ್ತು ಪ್ರಮಾಣವಾಗಿರಿಸಿಕೊಂಡು ಅರ್ಥ ಮತ್ತು ಕಾಮಗಳು ಮಾನವನ ಜೀವನ ಅವಶ್ಯಕವು ಸಹಜವೂ ಆದಂತಹ ಧನ, ಧಾನ್ಯ, ಕನಕ ಮತ್ತು ಶರೀರ ಸಹಜವಾದ ಹಸಿವು, ಆಸೆ, ಆಕಾಂಕ್ಷೆಗಳನ್ನು ಗಳಿಸಿ, ತಣಿಸಿ, ಜಯಿಸಿ ಮೊದಲನೆಯದಾದ ಧರ್ಮದ ಎಲ್ಲೆ ಮೀರದ ರೀತಿ ಕೊನೆಯ ಮೋಕ್ಷ ಸಾಧನೆಗೆ ಹೇಗೆ ಹೊಂದಾಣಿಕೆ ಮಾಡಬೇಕು ಎನ್ನುವುದನ್ನು ಮತ್ತು ಮಾನವನು ಜೀವನವನ್ನು ಸಮಾಜಮುಖಿಯಾಗಿ ನಡೆಸಿಕೊಂಡು ಸಾಗುವ ಜೊತೆಗೆ ಅಂತರ್ಮುಖಿಯಾಗಿ ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳುವ ವಿಧಾನವನ್ನು ಜಗದಾದಿನೇಕಾರನೂ ಆದಂತಹ ಕೈವಲ್ಯ ಮೂರ್ತಿ ದೇವಾಂಗ ದೇವಲ ಮಹರ್ಷಿಗಳು ಕರ್ಮಮಾರ್ಗದ ಜೊತೆಜೊತೆಗೆ ಭಕ್ತಿ ಮಾರ್ಗದಲ್ಲಿ ಸಾಗಿ ದೈವಸಾಕ್ಷಾತ್ಕಾರ ಮಾಡಿಕೊಂಡು ಜಗತ್ತಿನ ಎಲ್ಲ ಜನರಿಗೆ ತೋರಿಸಿಕೊಟ್ಟಿರುವ ಬಗೆಯನ್ನು ಸರಳವಾದ ಜನಪದ ಶೈಲಿಯಲ್ಲಿ ಓದುಗರೆಲ್ಲರಿಗೂ ಮುಟ್ಟಿಸುವುದೇ ಈ ಪುಸ್ತಕದ ಉದ್ದೇಶ.

ಈ ನಿಟ್ಟಿನಲ್ಲಿ ಅನೇಕ ಆಸ್ತಿಕ ಮಹಾಶಯರು, ಸಂಘ ಸಂಸ್ಥೆಗಳು, ಮೇಲಾಗಿ ಹಂಪಿ ಹೇಮಕೂಟ ಗಾಯತ್ರಿ ಪೀಠವು ಸೇರಿದಂತೆ ನಮ್ಮ

ದೇವಾಂಗ ಧರ್ಮ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಸಾಕಷ್ಟು ಕೆಲಸಗಳು ಈಗಾಗಲೇ ಆಗಿದ್ದರೂ ಸಹ ಅದು ಹರಿಯುವ ನೀರಿನಂತೆ ನಿರಂತರವಾಗಿ ನಡೆಯುತ್ತಿರಬೇಕು. ಈ ನಿಟ್ಟಿನಲ್ಲಿ ನನ್ನ ಈ ಒಂದು ಪುಟ್ಟ ಪ್ರಯತ್ನ ಮಾಡಿರುತ್ತೇನೆ. ಈಗ ಲಭ್ಯವಿರುವ ದೇವಾಂಗ ಪುರಾಣವು ಬಹಳ ಸುದೀರ್ಘವೂ ಓದಲು ಸಾಕಷ್ಟು ಕಾಲಾವಕಾಶವು ಬೇಕಾಗಿರುವುದರಿಂದ ಇಂದಿನ ಜನಮಾನ ಪರಿಸ್ಥಿತಿಗೆ ಅದು ಕಷ್ಟಸಾಧ್ಯವಾದ ಕಾರಣ ದೇವಾಂಗ ಪುರಾಣದ ಕಥಾಸಾರವನ್ನು ಸಂಕ್ಷಿಪ್ತವಾಗಿ ಸರಳವಾದ ಜಾನಪದ ಶೈಲಿಯಲ್ಲಿ ಚಿಕ್ಕದಾಗಿಯೂ ಮೂಲ ಕಥೆಗೆ ಎಲ್ಲೂ ಚ್ಯುತಿ ಬಾರದ ರೀತಿಯಲ್ಲಿ ಹಾಗೂ ಯಾವುದೇ ರೀತಿಯ ಅತಿರೇಕವೆನಿಸದ ಹಾಗೆ ಬಹಳ ಪ್ರಮುಖವಾಗಿ ಗಮನಹರಿಸಬೇಕಾದ ವಿಷಯಗಳ ಬಗ್ಗೆ ವಿಷದವಾಗಿಯೂ ಬರೆಯಲಾಗಿದೆ. ಈ ಕೃತಿಯಲ್ಲಿ ಭಕ್ತಿಗೆ ಆದ್ಯತೆ ಕೊಟ್ಟು ''ಯಾ ದೇವೀ ಸರ್ವ ಭೂತೇಷು ಮಾತೃ ರೂಪೇಣ ಸಂಸ್ಥಿತಾ'' ಎಂಬುದನ್ನೇ ಪ್ರಮಾಣವಾಗಿರಿಸಿಕೊಂಡು ಮಾತೃ ಪ್ರಧಾನವಾಗಿಯೂ ಗಾಯತ್ರಿ ಪ್ರತೀಕವಾದ ಸೂತ್ರ ಅಥವಾ ಯಜ್ಞೋಪವೀತದ ಬಗ್ಗೆಯೂ ಸವಿವರವಾಗಿ ನನ್ನ ಪ್ರಾಪ್ತಜ್ಞಾನದ ಮಿತಿಯೊಳಗೆ ಬರೆಯುವ ಒಂದು ಪ್ರಾಮಾಣಿಕ ಪ್ರಯತ್ನ ಇದಾಗಿದೆ.

ಈ ಪುಸ್ತಕವು ನನ್ನಿಂದ ಆಯಿತು ಎನ್ನುವುದು ಅಹಂಕಾರ ಪರಮಾವಧಿ ಎಂದೇ ಹೇಳಬಹುದು ಅತ್ಯಲ್ಪ ವಿದ್ಯಾವಂತನು 'ಪ್ರಮುಗ್ಧಾಖಿಲಾಹಂ' ಆದ ನನಗೆ ನನ್ನ ತಂದೆ ತಾಯಿಗಳಿಂದ ಕೃಪಾಶೀರ್ವಾದದ ಪೂರ್ವಕವಾಗಿ ಅಪರೋಕ್ಷ ವಾಹಕವಾಗಿ ಬಂದಿರುವ ಭಕ್ತಿ ಮತ್ತು ಜ್ಞಾನ ಅಲ್ಲದೆ ಶರಣರ ಸಂತರ ಆಶೀರ್ವಚನಗಳು ಮತ್ತು ಅನೇಕ ಭಗವದ್‌ಭಕ್ತರ ಪಾದ ಧೂಳಿನ ಆಶೀರ್ವಾದದ ಫಲವಾಗಿ ''ಹಿರಣ್ಯೋಧರಾರ್ಧ್ಯೈರಗಣ್ಯೇ ಸುಪುಣ್ಯೇ''ಯಾದ ಶ್ರೀ ಬನಶಂಕರಿಯ ಅನುಗ್ರಹದ ಬಲದಿಂದ ಈ ಬರವಣಿಗೆ ಸಾಧ್ಯವಾಯಿತು ಎಂದೇ ಪ್ರಾಮಾಣಿಕವಾಗಿ ಹೇಳಲು ಬಯಸುತ್ತೇನೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ವಿಜೇತರು, ಖ್ಯಾತ ವಿಮರ್ಶಕರು ಆದ ನಾಡೋಜ ಪ್ರೊ॥ ಕೆ.ಜಿ. ನಾಗರಾಜಪ್ಪನವರು ಅಗತ್ಯ ಸಲಹೆ ಮತ್ತು ಮಾರ್ಗದರ್ಶನವನ್ನು

ನೀಡಿರುತ್ತಾರೆ. ಹಾಗೆಯೇ ಈ ದೈವಿಕ ಕಾರ್ಯದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ತಿದ್ದಿ ತೀಡಿ ಪೂರ್ಣ ರೂಪ ಕೊಡಲು ಉಪಕರಿಸಿದ ಎಲ್ಲಾ ಆಸ್ತಿಕ ಪುಣ್ಯ ಚೈತನ್ಯಗಳಿಗೆ ಹೃದ್‌ಭಕ್ತಿಪೂರಕವಾಗಿ ಶಿರಸಾ ಸಾಷ್ಟಾಂಗ ನಮಸ್ಕಾರವನ್ನು ಮಾಡುತ್ತೇನೆ.

ಹಾಗೆಯೇ ಈ ಕೃತಿಗೆ ಒಂದು ಪುಸ್ತಕದ ರೂಪ ಕೊಡಲು ಮುದ್ರಕರಾದ ಶ್ರೀ ಜನಾರ್ದನ್‌ರವರು ಬಹಳ ತಾಳ್ಮೆಯಿಂದ ನನಗೆ ಸಲಹೆ ಸಹಕಾರವನ್ನು ನೀಡಿ ನಮ್ಮ ಅಪೇಕ್ಷೆಗೆ ತಕ್ಕಂತೆ ತುಂಬಾ ಅಂದವಾಗಿ ಮುದ್ರಿಸಿಕೊಟ್ಟಿರುತ್ತಾರೆ. ಹಾಗೆಯೇ ವಿನ್ಯಾಸಕಾರರಾದ ಶ್ರೀ ಬಿ. ರಾಜ್ ಕುಮಾರ್‌ರವರು ಸಹ ನಮ್ಮ ಅನಿಸಿಕೆಯಂತೆಯೇ ಮುಖಪುಟ ವಿನ್ಯಾಸ ಮೊದಲುಗೊಂಡು ಪುಸ್ತಕದಲ್ಲಿರುವ ಎಲ್ಲಾ ಚಿತ್ರಗಳು ಬಹಳ ಸುಂದರವಾಗಿ ಮೂಡಿಬರುವಂತೆ ಮಾಡಿದ್ದಾರೆ. ಅಷ್ಟೇ ಅಲ್ಲದೆ ಮುದ್ರಣ ಕಾರ್ಯದಲ್ಲಿ ಕೈಜೋಡಿಸಿದ ಎಲ್ಲರಿಗೂ ಮನಃಪೂರ್ವಕ ಅಭಿನಂದನೆಯನ್ನು ಸಲ್ಲಿಸುತ್ತೇನೆ.

ಶ. ಮಹಾದೇವ

ನಂ.8, ಆನೆಕಲ್ಲಪ್ಪ ಮಠದ ಗಲ್ಲಿ
ನಾರಾಯಣ ಶೆಟ್ಟಿ ಪೇಟೆ,
ಬೆಂಗಳೂರು - 560 002
ದೂರವಾಣಿ : 22227267
ಮೊಬೈಲ್ : 8867403022
8861890804

# ಆಶೀರ್ವಚನ

ಇಡೀ ವಿಶ್ವಕ್ಕೆ (ಬಟ್ಟೆ) ವಸ್ತ್ರವನ್ನು ಕೊಟ್ಟ ಹೆಗ್ಗಳಿಕೆ ದೇವಾಂಗ ನೇಕಾರರಿಗಿದೆ. ಶ್ರೀ ದೇವಾಂಗ ಮಹರ್ಷಿಯು ಮೂಲತಃ ಶಿವನ ಹಣೆಗಣ್ಣಿನಿಂದ ಬಂದವನು ಎಂದು ಶಾಸ್ತ್ರವು ಹೇಳುತ್ತದೆ. ದೇವಾಂಗ ಪುರಾಣವನ್ನು ಈಗಾಗಲೇ ಅನೇಕ ಭಾಷೆಗಳಲ್ಲಿ ಮುದ್ರಿಸಿ ಪ್ರಚಾರ ಮಾಡಲಾಗಿದೆ. ಇದೆಲ್ಲ ತಮಗೆ ತಿಳಿದ ಸಂಗತಿ. ಅದೇ ರೀತಿಯಾಗಿ ದೇವಾಂಗ ಪುರಾಣವನ್ನು ಭಾಮಿನಿ ಷಟ್ಪದಿಯಲ್ಲಿ ಬರೆದು ಮುದ್ರಿಸಿ ಪ್ರಚಾರ ಮಾಡಲಾಗಿದೆ. (ಈಗ ಮುದ್ರಿಸಿದ ಗ್ರಂಥಗಳು ಮುಗಿದಿವೆ.)

ನಾವು ದೇವಾಂಗ ಮಹರ್ಷಿಯನ್ನು ವೇದಪುರುಷನಾಗಿ, ಪುರಾಣ ಪುರುಷನಾಗಿ ನೋಡಿದ್ದೇವೆ. ಈಗ ಶ್ರೀಯುತರಾದ ಶ. ಮಹಾದೇವರವರು ಜನಪದ ಶೈಲಿಯಲ್ಲಿ ದೇವಾಂಗ ಮಹರ್ಷಿಯನ್ನು ಬಿಂಬಿಸಿದ್ದಾರೆ.

ದೇವಾಂಗ ಪುರಾಣದ ಕೆಲವೊಂದು ಭಾಗಗಳನ್ನು ಆರಿಸಿ ಒಟ್ಟು 72 ವಚನಗಳನ್ನು ಜನಪದ ಶೈಲಿಯಲ್ಲಿ ಬರೆದು ಅದಕ್ಕೆ ಅರ್ಥವನ್ನು ಬರೆದಿದ್ದಾರೆ. ತುಂಬ ಸುಂದರವಾಗಿ ಅರ್ಥಗರ್ಭಿತವಾಗಿ ವಿಚಾರವನ್ನು ತಿಳಿಸಿದ್ದಾರೆ. ಅವರ ಮೊದಲ ಪ್ರಯತ್ನ ಚೆನ್ನಾಗಿ ಮೂಡಿಬಂದಿದೆ. ಇದರಲ್ಲಿ ಕೆಲವೊಂದು ದೇವಾಂಗ ಮಹರ್ಷಿಯ ಭಕ್ತಿಗೀತೆಗಳನ್ನು ಮತ್ತು ಶ್ರೀ ಬನಶಂಕರಿ ಭಕ್ತಿಗೀತೆಗಳನ್ನು ಬರೆದಿದ್ದಾರೆ. ಇವರಲ್ಲಿರುವ ಸಮಾಜದ ಸಾಹಿತ್ಯ ಆಸಕ್ತಿಯನ್ನು ಎತ್ತಿ ತೋರಿಸುತ್ತದೆ. ಇದೇ ರೀತಿಯಾಗಿ ಸಮಾಜದ ಸಾಹಿತ್ಯ-ಚಿಂತನೆ, ಇವರಲ್ಲಿ ಮೂಡಿಬರಲಿ.

"ಶ್ರೀ ಜಗದಾದಿ ನೇಕಾರ ಗುರು ದೇವಲ ಮಹರ್ಷಿ" ಎಂಬ ಈ ಹೊತ್ತಿಗೆ ಆದಷ್ಟೂ ಬೇಗನೆ ಮುದ್ರಿಸಿ ಹೊರಬಂದು ಸಾಹಿತ್ಯಾಭಿಮಾನಿಗಳ ಕೈಸೇರಲಿ. ಶ್ರೀವೇದಾಮಾತಾಶ್ರೀಗಾಯತ್ರಿದೇವಿಯು ಇನ್ನು ಇವರಿಗೆ ಅನೇಕ ಗ್ರಂಥಗಳನ್ನು ಬರೆಯಲು ಶಕ್ತಿಯನ್ನು ನೀಡಲಿ ಎಂದು ನಾವು ತುಂಬು ಹೃದಯದಿಂದ ಹಾರೈಸುತ್ತೇವೆ.

ಇತಿ ವೇದೋಕ್ತ ಶುಭಾಶೀರ್ವಾದಗಳು
ಪೂಜ್ಯ ಶ್ರೀದಯಾನಂದಪುರಿಸ್ವಾಮೀಜಿಯವರು
ಶ್ರೀಗಾಯತ್ರಿಪೀಠ ಹೇಮಕೂಟ, ಹಂಪಿ

# ದೇವಲ ಚರಿತ್ರೆಯ ಒಂದು ಹೊಸ ಪ್ರಯೋಗ

ಕನ್ನಡ, ಮರಾಠಿ, ತಮಿಳು ಹಾಗೂ ತೆಲುಗು ಭಾಷೆಗಳಲ್ಲಿ ಅನೇಕ ದೇವಾಂಗ ಪುರಾಣಗಳು, ಪದ್ಯ-ಗದ್ಯಗಳಲ್ಲಿ ಪ್ರಕಟವಾಗಿವೆ. ಆದರೆ ಅವುಗಳೆಲ್ಲ ಯಾವಾಗಲಾದರೊಮ್ಮೆ ಸಾರ್ವಜನಿಕವಾಗಿ ಪ್ರವಚನಕ್ಕೆ ಸೀಮಿತವಾಗಿವೆ. ಸಾಕಷ್ಟು ಜನರಿಗೆ ದೇವಾಂಗ ಚರಿತ್ರೆಯ ವಿವರ ಗೊತ್ತಿರುವುದಿಲ್ಲ, ಇಂತಹ ಸಂದರ್ಭದಲ್ಲಿ ಶ್ರೀ ಮಹಾದೇವ ಅವರು ದೇವಲ ದೇವಾಂಗನ ಮಹಿಮೆಯನ್ನು ಕೆಲವೇ ಪುಟಗಳಲ್ಲಿ ಜಾನಪದ ಶೈಲಿಯಲ್ಲಿ ರಚಿಸಿ ಜನ ಸಾಮಾನ್ಯರಿಗೂ ಅರ್ಥವಾಗುವಂತೆ ಬಿಡಿಸಿ, ಅರ್ಥೈಸಿ ರಚಿಸಿರುವುದು ಒಂದು ಹೊಸ ಪ್ರಯೋಗ. ಇದನ್ನು ಕುಲ-ಬಾಂಧವರು, ಓದಿ ತೃಪ್ತಿ ಹಾಗೂ ಮೆಚ್ಚುಗೆ ವ್ಯಕ್ತಪಡಿಸಿದರೆ ಮಹಾದೇವ ಅವರ ಶ್ರಮ ಸಾರ್ಥಕವಾಗುತ್ತದೆ ಅವರಿಂದ ಇನ್ನೂ ಇಂತಹ ಪ್ರತಿಗಳು ಬೆಳಕಿಗೆ ಬರಲಿ.

**ಶಂಕರ ಎಂ. ಬುಚಡಿ**
ಸಾಹಿತಿಗಳು, ದೇವಾಂಗ ಧರ್ಮ ಸಂಶೋಧಕರು
ಮಾಜಿ ಅಧ್ಯಕ್ಷ
ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ
ಖಾಸಬಾಗ ಬೆಳಗಾವಿ - 590004

# ದೇವಿ ಸ್ತುತಿ



ಅಜಾಂಡ ವಸನೇ ದೇವಿ ಆದಿಶಕ್ತಿ ಮಹೇಶ್ವರಿ

ಉಗಮ ಸ್ಥಿತಿ ಲಯಕಾರಿಣೆ ಲಲಿತೇ ಲಕ್ಷ್ಮೀ ಸ್ವರೂಪಿಣೆ

ಮನದಾವರೆಯೊಳು ನೆಲೆಸಿ ಹರಸಮ್ಮ ಓಂಕಾರಿಣೀ ಶಾರದೆ ॥

## ಅರ್ಥ

ಇಡೀ ಬ್ರಹ್ಮಾಂಡವನ್ನೇ ವಸ್ತ್ರದ ರೀತಿ ಧಾರಣೆ ಮಾಡಿರುವ ಆದಿಶಕ್ತಿಯಾದ ಮಹೇಶ್ವರಿಯೇ,

ಎಲ್ಲಾ ಚರಾಚರ ಜೀವವಸ್ತುಗಳ ಸೃಷ್ಟಿಗೂ, ಪಾಲನೆಗೂ ಮತ್ತು ಅವುಗಳ ಅಂತ್ಯಕ್ಕೂ ಕಾರಣಕರ್ತಳು, ಕ್ರಿಯಾಶೀಲಳೂ ಆದ ಲಕ್ಷ್ಮಿಸ್ವರೂಪಳೇ,

ನನ್ನ ಮನವೆಂಬ ತಾವರೆಯಲ್ಲಿ ನೆಲೆಸಿ ಸದಾ ಕಾಪಾಡು ತಾಯೆ ಓಂಕಾರ ರೂಪಳಾದ ಶಾರದೆಯೆ.

# ಜಗದಾದಿನೇಕಾರ ಗುರು
# ದೇವಲ ಮಹರ್ಷಿ ಜಾನಪದ ಗಾಥೆ

ಹಿಂದೊಂದು ಕಾಲದಿ ಎಲೆನಾರು ಮಡಿಯನ್ನು
ಉಡುತಿದ್ದ ಸುರ ಮುನಿ ಜನರೆಲ್ಲರು । ನೆರೆದು
ಹರನಲ್ಲಿ ವರವನ್ನು ಬೇಡ್ಯಾರು ॥ 1

ಸುರಗಂಗೆ ತಡೆದವನೇ ಉರಿಬೆಂಕಿ ಹಿಡಿದವನೆ
ಮುಕ್ಕಾದ ಚಂದ್ರನ್ನೆ ಮುಡಿದವನೆ । ಸರ್ವೇಶ
ಲೋಕವ ಕಾಯೋ ವಿಷಕಂಠನೇ ॥ 2

ಬೂದಿಯ ಬಳಿದವನೆ ಬೆಳ್ಳಿಯ ಹೊಳಪವನೆ
ಸರುಪದ ಜನಿವಾರ ರುದ್ರಾಕ್ಷಿ । ಹಾಕ್ಡೋನೆ
ಹುಲಿ ಚರ್ಮ ಬಟ್ಟೆ ಉಟ್ಟವನೆ ॥ 3

ಹುಣ್ಣಿಮೆ ಬೆಳಕಿನ ಕಾಂತಿಯ ಮೈ ಬಣ್ಣ
ಹಿಮಗಿರಿವಾಸಿ ಮುಕ್ಕಣ್ಣ । ಪರಶಿವ
ಕೊಡು ಮಾನ ಕಾಯೋ ವರವನ್ನ ॥ 4

ಜತನದ ಶೀಲಕ್ಕೆ ಮರೆಯಿಲ್ಲ ಮಾನಕ್ಕೆ
ಮುಜುಗರ ಖಿನ್ನತೆ ಜಗದೊಳಗೆ । ಸಂಪನ್ನ
ಸಂಸ್ಕೃತಿಯನು ತೋರು ಮನುಜರಿಗೆ ॥ 5

ಈರೇಳು ಲೋಕದ ಜ್ಯೋತಿ ಸ್ವರೂಪನು
ಕಣಕಣದೊಳಗಿನ ಚೈತನ್ಯನು । ಶಿವನು
ಭಕುತರ ಕಳವಳ ನೀಗುವನು ॥ 6

ಹಣೆಗಣ್ಣ ತೆರೆದಾಗ ಮೂಲೋಕ ಬೆಳಕಾಗ
ಉಸಿದ ದೇವಾಂಗ ದೇವರ । ದೇವಲ
ಮುನಿ ಬಂದು ಶರಣೆಂದ ಶಿವನೀಗ ॥ 7

ಕಾಲಕಾಲನೆ ಕಾಲಾತೀತನೆ ನೀನು
ಕಾಲಜ್ಞಾನಿ ಕಾಲಸಂಭವನೇ । ಶಿವ
ಶಂಕರನೆ ಶರಣು ಶರಣೆಂಬೆನು ॥ 8

ನೀನೇನಾನೇನಿನಾದಂತ ಆನಂದ
ತಪ್ಪಿಸಿ ಏಕಂತ ನನ ತಂದೆ । ಪರಮೇಶ
ಆಗಲಿ ಆದೇಶ ವರವೆಂದೆ ॥ 9

ಹರಿಯಲ್ಲಿ ನೀ ಹೋಗಿ ತಂತು ಬೀಜವ ಪಡೆದು
ಇಳೆಗೆ ನೀನಿಳಿದು ಉದ್ಧರಿಸು । ಜಗಕೆಲ್ಲಾ
ಸೂತ್ರ ವಸ್ತ್ರವ ಕೊಟ್ಟು ಎತ್ತರಿಸು ॥ 10

ಶಿವನ ಅಭಿಮತವೇ ಜಗಕೆ ಹಿರಿಪಥವು
ಮೂಜಗದೊಳು ಮೀರಿ ನಡೆವುದುಂಟೆ । ಹರನ
ಮತಿ ಎದುರು ಇನ್ನೊಂದು ಬಗೆಯುಂಟೆ ॥ 11

ಜಗದೀಶನ ಸತಿಯೆ ಜಗದಾದಿ ಮಾತೆಯೆ
ನಿನ ಮಡಿಲ ಇಳೆಯಲ್ಲಿ ನಾನಿಳಿವೆ । ಕಾಯವ್ವ
ಶಿವನಾಜ್ಞೆ ಸಫಲಕೆ ನೀನಿರುವೆ ॥ 12

ಲೋಕದ ಜನರನು ಉದ್ಧರಿಸಲು ಪರಶಿವ
ಉತ್ಥಾನ ದ್ವಾದಶಿ ದಿನದಂದು । ದೇವಲನ
ಕರುಣಿಸಿ ಕಳುಹಿದ ಧರೆಗಿಂದು 13

ಶಿವನಿಗೆ ಶರಣೆರಿಸಿ ಶಿವನಾಣತಿ ಸ್ಮರಿಸಿ
ತೆರಳಿದ ವೈಕುಂಠವನು ಅರಸಿ । ದೇವಲ
ಮುನಿವರ ಹರಿನಾಮವನು ಜಪಿಸಿ ॥ 14



ಶ್ರೀಪತಿ ಶ್ರೀಶನೆ ಶ್ರೀ ಶ್ರೀನಿವಾಸನೆ
ಶ್ರೀಕಾಂತ ಶ್ರೀನಿಧಿ ಶ್ರೀಧರನೆ । ಶ್ರೀಹರಿ
ಕಾರುಣ್ಯ ಕರುಣಿಸು ಶ್ರೀಪಾದನೆ ॥ 15

ನಾಗರ ಪಲ್ಲಂಗ ಸಿರಿ ಲೋಲ ಶ್ರೀರಂಗ
ಶ್ರೀಚಕ್ರ ಶಂಖ ಕಮಲಾಂಗ । ಪಾದದ
ಸೇವೆಗೆ ಗರುಡ ಭಜರಂಗ ॥ 16

ಅಸುರ ಮರ್ಧನನೇ ಜನತಾ ಜನಾರ್ಧನನೇ
ಗಧೆ ಕಮಲಧಾರಿ ಗೋವಿಂದನೇ । ಹರಿಯೆ
ಕೌಸ್ತುಭ ತುಳಸಿ ವನಮಾಲನೆ ॥ 17

ಹಾಲಿನ ಕಡಲಲ್ಲಿ ಹಾಯಾಗಿ ಮಲಗೋನೆ
ವಸ್ತ್ರ ಸೂತ್ರದ ತಂತು ವರಮೂಲನೆ । ಮದನ
ಪಿತ ನಮ್ಮ ಕಾಯೋ ಮಧುಸೂದನನೆ ॥ 18

ಪದುಮನಾಭನೆ ನಿನ್ನ ಪಾದಕೆ ನಮಿಪೆನು
ತಂತು ಮೂಲವನು ನಾ ಬೇಡಲು । ಬಂದಿಹೆನು
ಪಶುಪತಿಯಾಣತಿ ಪಾಲಿಸಲು ॥ 19

ವಾಂಛಿತಗಳ ಜನನಿ ವಾಂಛಿತ ವರದೆ
ವರದ ಮೂರುತಿಯ ಮನದನ್ನೆ। ಮಹಾಲಕ್ಷ್ಮಿ
ವರ ಕೊಡ ಮಾಡಿಸು ವರಲಕ್ಷ್ಮಿಯೆ ॥ 20

ಕೊಡುವುದು ನನ ಶಕುತಿ ಕಾಯ್ವುದು ನಿನ ಯುಕುತಿ
ನಿನ್ನಯ ಪಾತ್ರ ಹಿರಿದಾದುದು । ದೇವಲ
ನಿನ್ನಿಂದ ಜಗಕೆ ಮಂಗಳವಾಗ್ವುದು ॥ 21

ಪಾಲಾಕ್ಷಜಗೆ ವರವಿತ್ತ ಪಂಕಜಾಕ್ಷನ ಸುತ್ತ
ಇಂದ್ರಾದಿ ಸುರಮುನಿ ಜನರೆಲ್ಲರು । ನಮಿಸಿ
ಸಂತಸದಿಂದ ಸ್ತುತಿಗೈದರು ॥ 22

ವಿಷಗಳಧರನಾಣತಿಗೆ ಪಾಲ್ಗಡಲ ಪತಿ ನೆರವಾಗಿ
ದೇವಲ ಮುನಿ ಜಗಕೆ ವರವಾಗಿ । ಜಗಕೆಲ್ಲಾ
ಸೂತ್ರ ವಸ್ತ್ರದ ದಾತ ತಾನಾಗಿ ॥ 23

ಸೂತ್ರ ವಸ್ತ್ರವ ತಾ ನೀಡಲು ಜಗಕೆಲ್ಲಾ
ಧರೆಗಿಳಿದ ದೇವಲ ಮುನಿವರನು । ಜನರೊಳು
ಬೆಳೆಸಲು ಧರ್ಮ ಸಂಸ್ಕೃತಿಗಳನು ॥ 24



ಶಿವಗೆ ಮಾತನು ಇತ್ತು ತಂತು ಬೀಜವ ಹೊತ್ತು
ದೇವಲ ಮುನಿವರ ಬರುವಾಗ । ವಸುಧೆಯ
ಸೊಬಗನು ಕಂಡು ಬೆರಗಾದ ॥ 25

ಭೂ ಹಸಿರಿನ ಸೀರೆಗೆ ಹೂಲತೆ ಕುಸುರಿಯು
ಇಳಿಯುವ ಜಲಧಾರೆ ನೆರಿಗೆಗಳು । ಭೂತಾಯ
ಸೀರೆಗೆ ನೂರು ಚಿತ್ತಾರಗಳು ॥ 26

ಸಾಗರದಲೆಗಳು ಹರಡಿದೆ ಸೆರಗನ್ನು
ಗಿರಿಸಾಲ ಅಂಚು ಮೆರಗಿನ । ಸೀರೆಯು
ಭೂರಮೆಗೆ ಮೋಡಿಯ ಉಡುಗೆಯು ॥ 27

ಭೂರಮೆಯ ಸೊಬಗನ್ನು ನೋಡುತ ಮುದಗೊಂಡು
ಬೆರಗಾಗಿ ದೇವಲ ಬರುವಾಗ ।ಕುಜನರು
ತಂದರು ಕುಟಿಲತೆ ತೊಡರಾಗ ॥ 28

ತಂತು ಬೀಜವನು ಕಸಿಯಲು ಕುಜನರು
ಕಪಟ ಸಂಚನು ಹೂಡಿ ಕಾಡುವರು । ಸೂತ್ರವ
ಪಡೆಯಲು ಹೊಂಚನು ಮಾಡುವರು ॥ 29

ಕುಜನರ ಕುಟಿಲತೆ ಹೊಂಚು ಸಂಚನು ಮುರಿದು
ಸಂಚಿತ ತಂತನು ಕಾಪಾಡಲು । ಮುನಿವರನು
ಶಂಕರಿ ಕರುಣೆಗೆ ಮೊರೆಹೋದನು ॥ 30

—o—

ವಿದ್ಯೆಯ ಕೊಡುವ ಶಾರದೆ ನೀನಾದೆ
ಸಂಪದ ಕೊಡಲು ಲಕುಮಿಯಾದೆ । ಗೌರಿ
ಮಂಗಳ ಕಾರ್ಯಕ್ಕೆ ಶಕುತಿಯಾದೆ ॥ 31

ಯಜನದ ಮೂಲ ದೇವತೆ ನೀನಾದೆ
ಯಜ್ಞದ ಮೂಲ ಮಂತ್ರವಾದೆ । ಗಾಯತ್ರಿ
ಮಂತ್ರದ ಛಂದಸ್ಸು ನೀನಾಗಿರುವೆ ॥ 32

ಸುರಮುನಿಗಳಾದಿ ಹರಿಹರ ಬೊಮ್ಮರು
ಜಪಿಸುವ ಮಂತ್ರವು ನೀನಾಗಿರುವೆ । ಪ್ರಣವದ
'ಅ ಉ ಮ' ಕಾರವು ತಾನಾಗಿರುವೆ ॥ 33

ಆದಿಯು ನೀನವ್ವ ಅನಾದಿಯು ನೀನವ್ವ
ಕೊನೆ ಮೊದಲ ನಡುವಿನ ಪರಿಧಿಯು । ಮೀರಿದ
ಪರಮ ಶಕುತಿಯು ನೀನವ್ವ ॥ 34

ಕೋಟಿ ಸೂರ್ಯರ ಪುಂಜ ನಿನ್ನೊಳಗೆ ಇರಲಾಗಿ
ಭೂಮಿ ಬ್ರಹ್ಮಾಂಡ ಮೊದಲಾಗಿ । ನಡೆವುದು
ನಿನ್ನಯ ಅಂಕೆ ಒಳಗಾಗಿ ॥ 35

ಉಪೇಕ್ಷೆ ನಿರಪೇಕ್ಷೆ ಸಾಪೇಕ್ಷೆಗಳಿಗೆಲ್ಲಾ
ಕಾರಣ ಸಾಕ್ಷಿ ಸ್ವರೂಪಿಣಿ । ನಿರುವಿ
ಕಾರದ ಸಾಕಾರ ರೂಪಿಣಿ ॥ 36

ಮನುಜಾದಿ ಮೃಗಪಕ್ಷಿ ಕೀಟಾದಿಗಳಲ್ಲೆಲ್ಲಾ
ಸೃಷ್ಟಿಯು ನಡೆವುದು ತಾಯಿಂದಲೇ । ಜಗವು
ಹುಟ್ಟಿ ನಡೆದಿಹುದು ನಿನ್ನಿಂದಲೇ ॥ 37

ಈ ಜಗದ ಮೂಲ ಶಕುತಿಯು ನೀನಾದೆ
ಆವರವರ ಭಾವಕ್ಕೆ ಹೆಸರಾದೆ । ನೂರಾರು
ರೂಪದಿ ಬಂದು ವರವಾದೆ ॥ 38

ಬನದೊಳಗೆ ತಾ ಕುಳಿತು ಶಂಕರಿಯನು ಕುರಿತು
ದೇವಲ ಮುನಿವರ ತಪಗೈದು । ಪರಶಿವೆಯ
ಕರುಣವ ಪಡೆಯಲು ಸ್ತುತಿಗೈದು ॥ 39

ಬನದೊಳಗೆ ತಾ ಬಂದು ಬನದ ಶಂಕರಿಯಾಗಿ
ದೇವಲ ಯತಿವರನ ಭಕುತಿಗೆ । ಕರುಣಿಸಿ
ಶಂಕರಿ ನಿಂತಳು ವರವಾಗಿ ॥ 40

ಕುಟಿಲತೆಯ ಕುಜನರೈವರನು ತಾ ತರಿದು
ದುರುಳರ ರುಂಡ ಚೆಂಡಾಡಲು । ಚಂಡಿಯು
ಚೌಡೇಶ್ವರಿಯಾಗಿ ತಾ ಮೆರೆದಳು ॥ 41

ಕುಜನರ ಅಣಗಿಸಿ ದೇವಲನ ಕರುಣಿಸಿ
ಪೂರ್ಣಕುಂಭದಿ ನಿಂತ ಸಾಕಾರಳು । ಚೌಡಾಂಬೆ
ಶರಣೆಂದ ಜನರನ್ನು ತಾ ಪೊರೆವಳು ॥ 42

ಹರನಾಣತಿ ಹರಿಕರುಣೆ ಎಲ್ಲಾ ಜನ ಹಿತಕಾಗಿ
ಶಂಕರಿ ದಯೆಯಿಂದ ದೇವಲನು । ಮಯನಲ್ಲಿ
ಸಲಕರಣೆ ತರಲೆದು ತಾ ಪೋದನು ॥ 43

—o—

ವೇದ ಶಾಸ್ತ್ರಗಳನರಿತ ವೇದಾಂಗಗಳ ನುರಿತ
ಸಕಲ ಕಲಾ ವಿದ್ಯ ಪಾರಂಗತ । ಸುಗುಣ
ಯತಿವರನೆ ಪಾಲಿಸು ಕರುಣಾವರ ॥ 44

ಜ್ಯೋತಿರ್ ಶಾಸ್ತ್ರದ ಮೂಲ ಸೂರ್ಯ ಸಿದ್ಧಾಂತವ
ಸೂರ್ಯನಿಂದಲೇ ವರವಾಗಿ ಪಡೆದಂತ । ಮಯನಿಗೆ
ದೇವಲ ಮುನಿವರನು ಶರಣೆಂದ ॥ 45

ಜ್ಯೋತಿಜ್ಞ ಶಿಲ್ಪಜ್ಞ ಮಂತ್ರಜ್ಞ ತಂತ್ರಜ್ಞ
ವೇದಾಂಗ ಮೂರುತಿ ಬ್ರಹ್ಮಜ್ಞ । ದಿತಿಸುತ
ರೊಳು ನೀನೆ ಶ್ರೇಷ್ಠ ದೈವಜ್ಞ ॥ 46

ನಯವಾದ ನೇಯ್ಗೆಗೆ ಹದವಾದ ಉಪಕರಣ
ಸಲಕರಣೆ ನೀಡೆಂದು ತಾ ಕೇಳಲು । ದೇವಲಗೆ
ಮುದದಿಂದ ಮಯನಾಗ ಕೊಡಮಾಡಲು ॥ 47

ಮಗ್ಗ, ಹಗ್ಗ, ಗಳ, ಹಲಗೆ, ಗೂಟ, ಅಣಿಕೋಲು, ಸಲಗೆ
ಊಸಿ, ಜೊತೆ ಲಾಳಿ, ಗಣಿಕೆಗಳು । ದೊಣ್ಣೆ
ಕುಂಟೆ, ಮುಳ್ಳಿನ ದಂಡ, ಹಾವ್ಗೆ ಚಕ್ಕೆಗಳು ॥ 48

ಗುಪ್ಪು, ರಾಟೆ, ಕದಿರು, ಅರಟೆ, ತಟ್ಟಿನ ಬಿದಿರು
ಶಿಲೆಪಟ್ಟೆ ಪೇಟದ ಹಲಗೆಗಳು । ಚರಕ
ಅಚ್ಚಿನ ದಬ್ಬೆ ಕೋಲುಗಳು ॥ 49

ಸಲಕರಣೆ ಪಡೆದಂತ ದೇವಲ ಮುನಿವರನು
ಮಯನಿಗೆ ಶರಣೆಂದು ನಮಿಸುತ । ವಿನಯದಿ
ಹೊರಟನು ಶಿವನಾಜ್ಞೆ ಸ್ಮರಿಸುತ ॥ 50

ಮಗ್ಗವ ಕಟ್ಟಿ ತಂತು ಬೀಜದಿ ಹತ್ತಿ
ನೂಲನು ನೂಲುತ ಅಣಿಯಾದ । ನೀಡಲು
ಮಾನ ಸಂಸ್ಕಾರಕ್ಕೆ ವಸ್ತ್ರ ಸೂತ್ರಗಳ ॥ 51

ಪ್ರಕೃತಿಗನುವಾಗಿ ಸಂಸ್ಕೃತಿಯನು ನೀಡಿ
ವಿಕೃತಿಯನು ಕಳೆವ ಆಚಾರವು । ಅರಿವಿನ
ಸಿದ್ಧಿಗೆ ಸಾಧನ ಉಪವೀತವು ॥ 52

ಬಾಳೆಯ ಸುಲಿಯದೆ ತಿನುವುದೆ ಪ್ರಕೃತಿಯು
ಸುಲಿದು ತಿನ್ನುವುದು ಸಂಸ್ಕೃತಿಯು । ಕೊಳೆಸುತ
ಬಟ್ಟೆಯ ಕುಡಿವುದು ವಿಕೃತಿಯು ॥ 53

ಉಪವೀತ ಧಾರಣೆ ನಿತ್ಯ ಪೂಜಾರ್ಚನೆ
ಧರ್ಮದ ಅನುಸರಣೆ ಬಲವುಂಟು । ಮನಸಿಗೆ
ಅಂಕುಶವಿರಿಸುವ ಸನ್ಮತಿಯುಂಟು ॥ 54

ಕರ್ಮಕ್ಕೊಂಟಿಯ ಗಂಟು ಧರ್ಮಕ್ಕೆ ಎರಡುಂಟು
ಕೂಡಿ ಜ್ಞಾನಕ್ಕೆ ಮೂರುಂಟು । ಉಪವೀತ
ನಿತ್ಯಾಚರಣೆ ಲಾಭ ಶುಭವುಂಟು ॥ 55

ಕರ್ಮ, ಧರ್ಮ, ಜ್ಞಾನ ಮೂರರ ಗಂಟಿಗೆ
ಮೂರರ ಒಂಬತ್ತು ನೂಲೆಳೆಯುಂಟು । ಮೂರಕ್ಕೂ
ಸತ್ವ ರಜೋ ತಮಗಳ ಸೆಳವುಂಟು ॥ 56

ಜಗಮೂಲವ್ಯೆದಕ್ಕೂ ಗತಿ ಮೂರಾಧಾರವು
ಮೂರನು ಕೂಡಿ ಐದರೊಳು ಬೇಡು । ಮತಿಗತಿ
ದಿಯೋ ಯೋನಃ ಪ್ರಚೋದಯಾತ್ ॥ 57

ಕರ್ಮ ಧರ್ಮ ಜ್ಞಾನದ ಮೂರರ ಸಿದ್ಧಿಗೆ
ಅರಿವಿನ ಸೂತ್ರವ ತಾ ನೀಡಿದ । ಮನುಜರ
ಮಾನಕ್ಕೆ ಅರಿವೆಯ ಕೊಡ ಮಾಡಿದ ॥ 58

ನಡುಮನೆ ಬದಿಯಲ್ಲಿ ನಡು ಮಟ್ಟದ ಗುಂಡಿ
ಕುಣಿದವು ನಾಲ್ಕು ಅಚ್ಚುಗಳು । ಮೀಟ
ತುಣಿಯಲು ಹಾವ್ಗೆಯ ಚಕ್ಕಿಗಳು ॥ 59

ಅಚ್ಚುಗಳು ಕುಣಿಯುತ ದಾಯವ ಬಿಡಿಸ್ಯಾವು
ದಾಯದೊಳು ಲಾಳಿ ಹೊಕ್ಯಾವು । ಹಾಸು
ನೂಲಿನ ಅಣಿಯೊಳು ಬೆರೆತಾವು ॥ 60

ಬಣ್ಣದ ಸೀರೆಗೆ ಹೂ ಬಳ್ಳಿಯ ಕುಸುರಿಯು
ಹೊನ್ನಳೆ ಗಿರಿಸಾಲ ಅಂಚುಗಳು ಬೆರಗು
ಬೆಡಗಿನ ಬಣ್ಣದ ಜವಳಿಗಳು ॥ 61

ಶಿವನ ಆದೇಶವೇ ಹಾಸಾಗಿ ಬರುವಾಗ
ದೇವಿಯ ಕರುಣೆಯು ಹೊಕ್ಕಿರಲು । ನೇಯ್ಗೆಯ
ತನ್ಮಯದಿ ನೇಯ್ದನು ದೇವಲನು ॥ 62

ಉಡುತ್ತಿದ್ದ ಎಲೆ ನಾರು ಮಡಿ ಹರಿದು ಮುರಿದಾಗ
ನರನಾರಿಯರು ಎಲ್ಲಾ ನಾಚುತಲಿ । ಇರುವಾಗ
ಮುಜುಗರದಿ ಬದುಕನು ದೂಡುತಲಿ ॥ 63

ಜತನದ ಶೀಲವ ಕಾಪಾಡಲು ವಸ್ತ್ರವ
ಸಡಗರದಿಂದಲಿ ತಾ ನೇಯುತ । ದೇವಲ
ಮನುಜರ ಮುಜುಗರವ ನೀಗಿದ ॥ 64

ಅಂಗಾಂಗಕೊಪ್ಪುವ ಶೃಂಗಾರ ವಸ್ತ್ರವ
ನೀಡಿದ ದೇವಾಂಗ ದೇವರ । ದೇವಲಗೆ
ಶರಣೆಂದು ಕುಣಿದರು ಜನರಾಗ ॥ 65

ಸೂತ್ರ ವಸ್ತ್ರವನು ಜಗಕೆಲ್ಲಾ ನೀಡಿದ
ಸುರಮುನಿ ಜನಕೆಲ್ಲಾ ಕೊಡಮಾಡಿದ । ದೇವಲ
ಶಿವನಾಣತಿಯನ್ನು ಪೂರೈಸಿದ ॥ 66

ಸೂತ್ರ ವಸ್ತ್ರಗಳ ಪಡೆದಂತ ಸುರ ಮುನಿ
ಜನರೆಲ್ಲಾ ದೇವಲನ ಕೊಂಡಾಡಲು । ದೇವಾಂಗ
ಯತಿವರಗೆ ಶಿರಬಾಗಿ ಶರಣೆಂದರು ॥ 67

ಅರಿವನು ಬೆಳೆಸಲು ಉಪವೀತಾಚರಣೆಯು
ಮಾನ ಸಂರಕ್ಷಣೆಗೆ ನೇಕಾರಿಕೆಯು । ಕಲಿಸಲು
ಬೆಳೆಯಿತು ಜನರೊಳು ಸಂಸ್ಕೃತಿಯು ॥ 68

ಶಿವನ್ನಣೆಗಣ್ಣಿಂದ ಉದಿಸಿದ ದೇವಾಂಗ
ದೇವರ ದೇವಲ ಮುನಿವರನು । ಇಹ ಪರಕೆ
ದಾರಿಯ ತೋರಿದ ಗುರುವಾದನು ॥ 69

ಹರಿಯು ತಂತನು ಕೊಟ್ಟ ಮಯನು ತಂತ್ರವ ಕೊಟ್ಟ
ಶಂಕರಿ ವರದಿಂದ ಸೂತ್ರ ವಸ್ತ್ರಗಳ । ನೀಡುತ
ಶಿವನಾಣತಿ ಸಾಫಲ್ಯವನು ಮಾಡಿದ ॥ 70

ದೇವಲ ಮುನಿವರನ ಕಾಯಕ ನಿಷ್ಠೆಗೆ
ಶಿವನೊಲಿದು ನಂದಿಧ್ವಜ ಲಾಂಛನವ । ನೀಡುತ
ದೇವಲಗೆ ಕೈವಲ್ಯವನೆ ನೀಡಿದ ॥ 71

ಅರಿವು ಅರಿವೆಯ ಮಾರ್ಗವ ತೋರಿದ
ಜಗದಾದಿ ನೇಕಾರ ಗುರು ದೇವಲ । ಪಾದಕೆ
ಶರಣೆಂದು ಹಾಡಿರಿ ಜಯ ಮಂಗಳ ॥ 72

## ಅರ್ಥ

1. ಬಹಳ ಹಿಂದಿನ ಕಾಲದಲ್ಲಿ ದೇವಾನುದೇವತೆಗಳು, ಋಷಿಮುನಿಗಳು ಮತ್ತು ಜನಸಾಮಾನ್ಯರೆಲ್ಲರೂ ಸಹ ಮಾನವನ್ನು ಕಾಪಾಡಿಕೊಳ್ಳಲು ಗಿಡಮರಗಳ ನಾರುಮಡಿಗಳಿಂದ ಮತ್ತು ಎಲೆಗಳಿಂದ ಮೈಯನ್ನು ಮುಚ್ಚಿಕೊಂಡು ಶಿವನು ನೆಲೆಸಿರುವ ಕೈಲಾಸಕ್ಕೆ ಬಂದು ಮಾನ ಸಂರಕ್ಷಣೆಗೆ ಇರುವ ಸಂಕಷ್ಟಗಳನ್ನೂ ಬಗೆಹರಿಸಬೇಕು ಎಂದು ಶಿವನಲ್ಲಿ ಪ್ರಾರ್ಥಿಸುತ್ತಾರೆ.

2. ಭಗೀರಥನ ತಪಸ್ಸಿಗೆ ಗಂಗೆಯು ಒಲಿದು ದೇವಲೋಕದಿಂದ ನೇರವಾಗಿ ಧುಮ್ಮಿಕ್ಕಿ ಹರಿದು ಬೀಳುವ ರಭಸಕ್ಕೆ ಭೂಮಿಯು ತಡೆಯಲಾರದೆಂದು ತಿಳಿದು ಮೇಲಿಂದ ಬೀಳುವ ಗಂಗೆಯನ್ನು ಶಿರದಲ್ಲಿ ತಡೆದು ಜಟೆಯಲ್ಲಿ ಹಿಡಿದಿರಿಸಿ ನಿಧಾನವಾಗಿ ಭೂಮಿಯ ಮೇಲೆ ಹರಿಯುವಂತೆ ಮಾಡಿದ ಎಲ್ಲೈ ಶಿವನೇ, ಜ್ವಾಲಾಮುಖಿಗಳಿಗೂ ಅತಿಶಯವಾಗಿ ಉರಿಯುವ ಬೆಂಕಿಯನ್ನು, ಸೂರ್ಯನ ತೇಜಸ್ಸನ್ನು ತನ್ನ ಹಣೆಗಣ್ಣಿನಲ್ಲಿ ಇರಿಸಿಕೊಂಡಿರುವವನೇ, ಅನೇಕಾನೇಕ ಉತ್ಕರ್ಷಕಾರಕನೂ ಆದ ಕಾಂತೀಯ ಗುಣರೂಪಿಯಾದ ಪೂರ್ಣಚಂದ್ರನ ಬದಲಾಗಿ ನಿರಾಕರ್ಷಕ ಪ್ರತೀಕವಾಗಿ ಮುಕ್ಕಾದ ಚಂದ್ರನನ್ನು ಶಿರದಲ್ಲಿ ಮುಡಿದಿರುವವನೇ, ಸಮುದ್ರ ಮಂಥನ ಕಾಲದಲ್ಲಿ ಮೊದಲು ಬಂದ ಮಾಹವಿಷವನ್ನು ಜಗತ್ತಿನ ಉಳಿವಿಗಾಗಿ ತಾನೇ ಕುಡಿದು ತನ್ನ ಕಂಠದಲ್ಲಿಯೇ ಇರಿಸಿಕೊಂಡು ಲೋಕಗಳನ್ನು ಕಾಪಾಡುತ್ತಿರುವ ವಿಷಕಂಠನೇ

3. ನಿರಾಡಂಬರ ವೈರಾಗ್ಯ ಸೂಚಕವಾಗಿ ಬೂದಿಯನ್ನು ಬಳಿದುಕೊಂಡು ಬೆಳ್ಳಿಯಂತೆ ಹೊಳೆಯುತ್ತಿರುವವನೇ, ಹಾವಿನ ಜನಿವಾರವನ್ನು, ರುದ್ರಾಕ್ಷಿ ಮಣಿಹಾರವನ್ನು ಹಾಕಿ ಹುಲಿಯ ಚರ್ಮದ ಬಟ್ಟೆಯನ್ನು ಧರಿಸಿರುವವನೇ,

4. ಹುಣ್ಣಿಮೆಯ ಬೆಳದಿಂಗಳಿನಂತೆ ಕಾಂತಿಯುತವಾದ ಮೈಬಣ್ಣ ಹೊಂದಿರುವವನೇ, ಹಿಮಗಿರಿ ಸಾಲುಗಳಲ್ಲಿ ನೆಲೆಸಿರುವಂತಹ ಮೂರು ಕಣ್ಣುಗಳಿರುವ ಮುಕ್ಕಣ್ಣನೇ, ಪಾರಮಾರ್ಥನೂ ಮಂಗಳಕರನೂ ಆದಂತಹ ಪರಶಿವನೇ ನಮ್ಮೆಲ್ಲರ ಮಾನವನ್ನು ಕಾಪಾಡುವಂತ ವರವನ್ನು ದಯಪಾಲಿಸಿ ಕಾಪಾಡು.

5. ಬಹಳ ಜಾಗ್ರತೆಯಿಂದ ಜೋಪಾನ ಮಾಡಿಕೊಳ್ಳಬೇಕಾದ ಶೀಲವನ್ನು ಮುಚ್ಚಿಕೊಳ್ಳಲು ಆಗದೆ ಗೌರವವನ್ನು ಕಾಪಾಡಿಕೊಳ್ಳಲು ಅಸಾಧ್ಯವಾಗಿ ನಾಚಿಕೆಯಿಂದ ಮಾನಸಿಕ ಖಿನ್ನತೆಗೆ ಒಳಗಾಗಿ ಬಳಲುತ್ತಿರುವ ನಮಗೆ ಉತ್ತಮವಾದ ನಾಗರಿಕತೆಯ ಸಂಪನ್ನವಾದ ಸಂಸ್ಕೃತಿಯನ್ನು ದಯಪಾಲಿಸಿ.

6. ಈರೇಳು ಲೋಕಗಳಾದ ಭೂಃ, ಭುವಃ, ಸುವಃ, ಜನ, ತಪಃ, ಮಹಃ, ಸತ್ಯಲೋಕಗಳೆಂಬ ಏಳು ಲೋಕಗಳು ಸೇರಿ ಒಟ್ಟು ಹದಿನಾಲ್ಕು ಲೋಕಗಳ ಪ್ರತಿ ಕಣದೊಳಗಿನ ಕಣದ ಚೈತನ್ಯ ಶಕ್ತಿಸ್ವರೂಪನೂ ಮತ್ತು ಜ್ಯೋತಿಸ್ವರೂಪನಾದ ಹೇ ತೇಜೋಮಯ ಮೂರ್ತಿಯೇ, ಇಂತಹ ಮಹಾಮಹಿಮನಾದ ಶಿವನು ಭಕ್ತರೆಲ್ಲರ ಸಂಕಟ ನಿವಾರಿಸುವನು.

7. ಆ ಶಿವನು ತನ್ನ ಹಣೆಗಣ್ಣಿನಿಂದ ಮೂರನೇ ಕಣ್ಣನ್ನು ತೆರೆದ ಕ್ಷಣಮಾತ್ರದಲ್ಲಿ ಮೂರು ಲೋಕದ ತುಂಬ ಪ್ರಕಾಶಮಾನವಾದ ತೇಜಸ್ಸಿನ ಹೊರತು ಕಣ್ಣಿಗೆ ಬೇರೇನೂ ಕಾಣಿಸದಷ್ಟು ಪ್ರಕರವಾದ ಬೆಳಕಿನಿಂದ ರೂಪುಗೊಂಡಂತಹ ದಿವ್ಯ ತೇಜಸ್ಸಿನ ದೇದೀಪ್ಯ ಮಾನವಾದ ದೇವಾಂಗ ದೇವಲ ಮಹರ್ಷಿಯು ಪ್ರಕಟವಾದರು.

8. ಎಲ್ಲದರ ಅಂತ್ಯಗಳಿಗೇ ಅಂತ್ಯನಾದಂತಹ ಗತಿಪುರುಷನೆ ಯಾವ ಕಾಲಗಣನೆಗೂ ಸಿಲುಕದ ನಿಲುಕದ ಎಲ್ಲಾ ಕಾಲಕ್ಕೂ ಅತೀತನಾದಂತಹವನೇ ಭೂತ, ವರ್ತ, ಭವಿಷ್ಯದ ಎಲ್ಲಾ ಕಾಲದ

ಅರಿವನ್ನು ಉಳ್ಳವನೇ ಕಾಲಕಾಲಕ್ಕೆ ಘಟಿಸಬೇಕಾದಂತಹ ಘಟನೆಗಳಿಗೆ ಕಾರಣನೂ ಕಾರಕನು ಆದಂತಹ ಹೇ ಶಿವಶಂಕರನೇ ನಿನಗೆ ಶರಣು ಶರಣು ಎಂದು ದೇವಲನು ವಂದಿಸಿದನು.

9. ನೀನೇ ನಾನಾಗಿ ನಾನೇ ನೀನಾಗಿ ನಿನ್ನೊಳಗೆ ಒಂದಾಗಿದ್ದಂತಹ ಪರಮಾನಂದದ ಏಕಾಂತವನ್ನು ತಪ್ಪಿಸಿ ಏಕೆಂದು ನನ್ನನ್ನು ಹೊರಗೆ ಪ್ರಕಟ ಮಾಡಿದೆ ನನ್ನ ತಂದೆಯೇ, ಪರಶಿವನೇ ನಿನ್ನ ಈ ಸಂಕಲ್ಪ ಉದ್ದೇಶದ ಆದೇಶವು ನನಗೆ ವರವೆಂದೇ ಪರಿಗಣಿಸುವೆ.

10. ಹರಿಯ ಬಳಿಗೆ ಹೋಗಿ ಆ ಮಹಾವಿಷ್ಣುವಿನ ಬಳಿಯಿರುವ ತಂತು ಬೀಜವನ್ನು ಪಡೆದು ನಂತರ ಭೂಲೋಕಕ್ಕೆ ಹೋಗಿ ಹತ್ತಿಯಿಂದ ನೂಲನ್ನು ತೆಗೆದು ಸೂತ್ರ ವಸ್ತ್ರಾದಿಗಳನ್ನು ಮಾಡುವಂತವನಾಗಿ ಅವುಗಳನ್ನು ಎಲ್ಲರಿಗೂ ಕೊಟ್ಟು ಜಗತ್ತಿನ ಜನರೆಲ್ಲರನ್ನು ಉನ್ನತೀಕರಿಸಿ ಉದ್ಧರಿಸುವಂತವನಾಗು.

11. ಶಿವನ ಇಚ್ಛೆಯೇ ಜಗತ್ತಿನ ಜನರಿಗೆ ಬದುಕಿನ ಹೆದ್ದಾರಿಯಂತೆ ಇರುವಾಗ ಮೂರು ಲೋಕಗಳಲ್ಲಿ ಪರಶಿವನ ಸಂಕಲ್ಪವನ್ನು ಮೀರಿ ನಡೆಯುವುದು ಸಾಧ್ಯವೇ?

12. ಈ ಜಗತ್ತಿನ ಒಡೆಯನಾದ ಪರಶಿವನ ಸತಿ ಜಗತ್ತಿಗೆ ಮಾತೃಸ್ವರೂಪಳೇ ಆದ ಆದಿಶಕ್ತಿ ಹೇ ಜಗಜ್ಜನನಿಯೇ ನಿನ್ನ ಮಡಿಲಿನಲ್ಲಿರುವ ಭೂಲೋಕಕ್ಕೆ ನಾನು ತೆರಳಲಿದ್ದೇನೆ. ಆದ ಕಾರಣ ಪರಶಿವನ ಆಜ್ಞೆ ಸಾಫಲ್ಯವಾಗಲು ಭೂಲೋಕದಲ್ಲಿ ನನ್ನೊಂದಿಗೆ ಸಾಕ್ಷಾತ್ ನೀನೇ ಅನುಗ್ರಹಪೂರ್ವಕವಾಗಿ ಇರಬೇಕೆಂದು ಪ್ರಾರ್ಥಿಸುತ್ತೇನೆ.

13. ಲೋಕದ ಜನರಲ್ಲಿ ಧರ್ಮಾಚರಣೆಯುಕ್ತ ನಾಗರೀಕತೆ ಮತ್ತು ಸಂಸ್ಕೃತಿಯ ಜೀವನವನ್ನು ತೋರಿಸಿಕೊಟ್ಟು ಉದ್ಧಾರ ಮಾಡುವ ಸಲುವಾಗಿ ಪರಶಿವನು ಕಾರ್ತೀಕ ಮಾಸದ ಶುಕ್ಲಪಕ್ಷ ಉತ್ಥಾನ ದ್ವಾದಶಿ ದಿನದಂದು ದೇವಲ ಮಹರ್ಷಿಯನ್ನು ಪ್ರಕಟಗೊಳಿಸಿ ಭೂಮಿಗೆ ಕಳುಹಿಸಿದನು.

14. ಶಿವನಿಗೆ ಶಿರಬಾಗಿ ವಂದಿಸುತ್ತಾ ಶಿವನಾಜ್ಞೆಯನ್ನು ಪೂಜ್ಯಭಾವದಿಂದ ಸ್ಮರಿಸುತ್ತಾ ದೇವಾಂಗ ದೇವಲ ಮಹರ್ಷಿಯು ಕೈಲಾಸದಿಂದ ವೈಕುಂಠದ ಕಡೆ ಪ್ರಯಾಣ ಬೆಳೆಸಿದನು.



15. ಶ್ರೀಕಾರ ರೂಪಳಾಗಿ ಪೂಜಿಸಲ್ಪಡುವ ಲಕ್ಷ್ಮಿಪತಿಯೇ, ಎಲ್ಲಾ ಶುಭ ಸುಖ ಸಂಪತ್ತುಗ್ಗಳ ಒಡೆಯನೇ ಎಲ್ಲರಿಂದಲೂ ಪೂಜಿಸಲ್ಪಡುವ ಗೌರವಿಸಲ್ಪಡುವ ಮತ್ತು ಶ್ರೀಮನ್‌ಮಹಾಲಕ್ಷ್ಮಿಯು ಇರುವಲ್ಲಿಯೇ ಸದಾ ನೆಲೆಸಿರುವವನೇ, ಲಕ್ಷ್ಮಿಯ ಲಕ್ಷ್ಯವನ್ನೇ ತನ್ನತ್ತ ಆಕರ್ಷಿಸು ವಂತಹ ಕಾಂತಸ್ವರೂಪಿಯೇ, ಕಾಮಧೇನು, ಕಲ್ಪವೃಕ್ಷ, ಐರಾವತ ಮುಂತಾದ ಸರ್ವಶ್ರೇಷ್ಠನಾದ ಅನೇಕಾನೇಕ ಸಂಪತ್ತುಗ್ಗಳನ್ನು ತನ್ನಲ್ಲಿರಿಸಿ ಕೊಂಡಿರುವ ಶ್ರೀನಿಧಿಯೇ, ಹಣೆಯಲ್ಲಿ ಮಂಗಳಕರವಾದ ಶ್ರೀತಿಲಕ ವನ್ನು ಧರಿಸಿ ವಜ್ರ, ವೈಢೂರ್‍ಯಾದಿ ರತ್ನ ಖಚಿತ ಆಭರಣಗಳಿಂದ ಅಲಂಕೃತಗೊಂರುವವನೇ, ಶ್ರೀ ಲಕ್ಷ್ಮಿ ಕೃಪಾಕಟಾಕ್ಷವನ್ನು ಜಗತ್ತಿನ ಎಲ್ಲೆಡೆಗೂ ಹರಿಸುವಂತ ಕಾರುಣ್ಯ ಮೂರ್ತಿಯೇ, ಮಂಗಳಕರವಾದ ಪರಮ ಪುಣ್ಯ ಪಾದಗಳನ್ನು ಹೊಂದಿದ ಹೇ, ಪುಣ್ಯ ಮೂರ್ತಿಯೇ ಕರುಣೆಯನ್ನು ತೋರು.

16. ವಾಸುಕಿಯೆಂಬ ಹಾವಿನ ಮೆತ್ತನೆಯ ಬೆಚ್ಚನೆಯ ಹಾಸಿಗೆಯಲ್ಲಿ ಮಲಗಿರುವವನೇ, ಸಕಲ ಸಿರಿ ಸಂಪದದ ವೈಭೋಗಗಳನ್ನು ಆನಂದಿಸುವವನೇ ಶ್ರೀರಂಗನಾಥನೇ, ತನ್ನೆರಡು ಕೈಗಳಲ್ಲಿ ಶ್ರೀಚಕ್ರ, ಶಂಖವನ್ನು ಧರಿಸಿರುವಂತ ಕಮಲದ ಹೂವಿನಂತಹ ಕೋಮಲವಾದ ಶರೀರವುಳ್ಳವನೇ ನಿನ್ನ ಪಾದದ ಸೇವೆಗಾಗಿ ಗರುಡನು ಬಜರಂಗಿ ಹನುಮನು ಮತ್ತು ನಿನ್ನ ಭಜಿಸುವ ದಾಸರ ಮತ್ತು ಮುನಿಗಳ ರಂಗ ಇವರಿಂದ ಸೇವೆಯನ್ನು ಮಾಡಿಸಿಕೊಳ್ಳುತ್ತಿರುವವನೇ,

17. ದುರುಳರನ್ನು ಸಂಹಾರ ಮಾಡಿ ಭಕ್ತ ಜನರನ್ನು ಉದ್ಧಾರ ಮಾಡುವಂತವನೇ ತನ್ನ ಇನ್ನೆರಡು ಕೈಗಳಲ್ಲಿ ಗದೆ ಮತ್ತು ಕಮಲವನ್ನು ಧರಿಸಿರುವ ಗೋವಿಂದನೇ ಕೌಸ್ತುಭಮಣಿ ಮತ್ತು ತುಳಸಿ ಮಾಲೆಯನ್ನು ಧಾರಣೆ ಮಾಡಿರುವವನೇ,

18. ಹಾಲಿನ ಸಮುದ್ರದಲ್ಲಿ ಹಾಯಾಗಿ ಮಲಗಿರುವವನೇ ವಸ್ತ್ರದ ಸೂತ್ರದ

ತಂತುವಿನ ವರವನ್ನು ದಯಪಾಲಿಸುವವನೇ ಮನ್ಮಥನ ತಂದೆಯೇ ಮಧು ಎಂಬ ರಾಕ್ಷಸನನ್ನು ವಧಿಸಿದಂತಹ ಸಂಕಟ ಹರನೇ,

19. ಪದ್ಮ(ತಾವರೆ) ಹೂವಿನಂತಹ ನಾಭಿಯುಳ್ಳವನೇ ನಿನ್ನ ಪಾದಾರವಿಂದ ಗಳಿಗೆ ನಮಸ್ಕರಿಸುವೆನು ನೂಲಿನ ಎಳೆಗಳ ಮೂಲವಾದ ಬೀಜಗಳನ್ನು ಬೇಡಲು ನಿನ್ನ ಸನ್ನಿಧಿಗೆ ಶಿವನಾಜ್ಞೆಯನುಸಾರವಾಗಿ ಬಂದಿರುವೆನು.

20. ಆಸೆಗಳನ್ನು ಕೊಡುವವಳು ನೀನೇ, ಅವರವರ ಕರ್ಮಾನುಸಾರ ಅವರವರ ಆಸೆಗಳನ್ನು ಪೂರೈಸುವವಳು ನೀನೆ. ಶಿಷ್ಟ ರಕ್ಷಕನಾಗಿ ವರಗಳನ್ನು ದಯಪಾಲಿಸುವವನ ಮನಸಿನ ಅರಸಿ ಮಹಾಲಕ್ಷ್ಮಿಯೇ ಲೋಕ ಕಲ್ಯಾಣಾರ್ಥವಾಗಿ ನನಗೂ ಹರಿಯಿಂದ ವರವನ್ನು ಕೊಡಮಾಡಿಸು.

21. ಎಲೈ ದೇವಲನೇ ನೀನು ಕೇಳಿರುವ ತಂತು ಬೀಜವನ್ನು ನಾನು ಕೊಡಲು ಶಕ್ತನು ಸರಿಯಷ್ಟೆ ಆದರೆ ಅದನ್ನು ಕಾಪಿಟ್ಟು ನಿನ್ನ ಕಾರ್ಯ ಸಾಧನೆ ಮಾಡಿಕೊಳ್ಳಬೇಕಾದುದು ನಿನ್ನ ಬುದ್ಧಿಮತ್ತೆಯಿಂದ ಮತ್ತು ನಿನ್ನ ಪ್ರಮುಖವಾದ ಜವಾಬ್ದಾರಿಯಿಂದ ನಿಭಾಯಿಸಿದಾಗ ನಿನ್ನಿಂದ ಜಗತ್ತಿಗೆ ಒಳಿತಾಗುತ್ತದೆ.

22. ಪರಶಿವನ ಹಣೆಯ ಕಣ್ಣಿನಿಂದ ಹುಟ್ಟಿದಂತಹ ದೇವಲನಿಗೆ ವರವನ್ನು ಕರುಣಿಸಿದಂತಹ ತಾವರೆಯ ಹೂವಿನಂತಹ ಕಣ್ಣನ್ನು ಹೊಂದಿರುವ ಶ್ರೀಮನ್ಮಹಾವಿಷ್ಣುವಿನ ಸುತ್ತಲೂ ಇಂದ್ರಾದಿ ದೇವತೆಗಳು ಮುನಿಪುಂಗರು ನಮಿಸುತ್ತಾ ಹಾಡಿ ಕೊಂಡಾಡಿದರು.

23. ಸಮುದ್ರ ಮಂಥನದ ಸಮಯದಲ್ಲಿ ಕಾರ್ಕೋಟಕ ವಿಷವನ್ನು ಕುಡಿದು ಗಂಟಲಿನಲ್ಲಿಯೇ ಇರಿಸಿಕೊಂಡಂತಹ ಶಿವನ ಆಜ್ಞೆಗೆ ಅನುವಾಗಿ ಹಾಲಿನ ಕಡಲ ಒಡೆಯನಾಗಿ ವಿರಾಜಮಾನವಾಗಿರುವ ಶ್ರೀ ಮಹಾವಿಷ್ಣುವು ತಂತು ಬೀಜವನ್ನು ಅನುಗ್ರಹ ಮಾಡಿದ ಕಾರಣ ಜಗತ್ತಿಗೆ ಸೂತ್ರ ವಸ್ತ್ರವನ್ನು ಕೊಡುವಂತಹ ವರಮೂರ್ತಿಯಾಗಿ ದೇವಲ ಮುನಿಯು ಭುವಿಗೆ ಇಳಿದರು.

24. ಲೋಕದಲ್ಲಿ ಧರ್ಮೋದ್ಧಾರಕ್ಕಾಗಿ ಸೂತ್ರವನ್ನು ಮತ್ತು ವಸ್ತ್ರವನ್ನು ನೀಡುವುದರೊಂದಿಗೆ ಜನರಲ್ಲಿ ನಾಗರೀಕತೆ ಸಂಸ್ಕೃತಿ ಸದಾಚಾರಗಳನ್ನು ತಿಳಿಸಿ ಬೆಳೆಸಲು ಭೂಲೋಕಕ್ಕೆ ದೇವಲ ಮಹರ್ಷಿ ಭೂಲೋಕಕ್ಕೆ ಇಳಿದರು.



25. ಶಿವನ ಆಜ್ಞೆಗೆ ಶಿರಸಾವಹಿಸಿ ಯೋಜಿತ ಕಾರ್ಯವನ್ನು ಪೂರೈಸುವುದಾಗಿ ಜಗಜ್ಜನನಿಯ ಸಾಕ್ಷಿಯಾಗಿ ಪರಶಿವನಿಗೆ ದೇವಲನು ಮಾತನ್ನು ಕೊಟ್ಟು ಶ್ರೀ ವಿಷ್ಣುವಿನ ಬಳಿ ಹೋಗಿ ತಂತು ಬೀಜವನ್ನು ಕೇಳಿ ಪಡೆದು ವೈಕುಂಠದಿಂದ ಭೂಲೋಕಕ್ಕೆ ಆಕಾಶ ಮಾರ್ಗವಾಗಿ ಇಳಿಯುವಾಗ ಆ ರಮಣೀಯ ನಿಸರ್ಗದ ಸೊಬಗನ್ನು ಕಂಡು ಚಕಿತನಾಗಿ ನೋಡುತ್ತಾ ಬೆರಗಾಗಿ ಬರುತಿರಲು,

26. ಭೂದೇವಿಯು ಹಸಿರು ಬಣ್ಣದ ಸೀರೆಯನ್ನು ಉಟ್ಟಿರುವ ಹಾಗೆ ಆ ಸೀರೆಗೆ ಹೂಬಳ್ಳಿ, ಕಾಯಿ, ಹಣ್ಣುಗಳ ಚಿತ್ತಾರಗಳು ಮೂಡಿದಂತೆಯು, ಬೆಟ್ಟದ ಮೇಲಿಂದ ಬೀಳುವ ಜಲಧಾರೆಗಳೇ ಸೀರೆಯ ನೆರಿಗೆಗಳಂತೆಯೂ ದೇವಲ ಮಹರ್ಷಿಗೆ ರಮ್ಯ ಮನೋಹರ ದೃಶ್ಯ ಚಿತ್ರಣವು ಗೋಚರಿಸುತ್ತಿತ್ತು

27. ಒಂದರ ಹಿಂದೊಂದರಂತೆ ಬರುವ ಸಮುದ್ರದ ನೀರಿನ ಅಲೆಗಳು ಭೂದೇವಿ ಸೀರೆಯ ಹೊಳೆಯುವ ಸೆರಗನ್ನು ವಿಶಾಲವಾಗಿ ಹರಡಿ ದಂತೆಯೂ ಸಾಲಾಗಿ ನಿಂತಿರುವ ಹಿಮಗಿರಿಗಳು, ಘಟ್ಟಶ್ರೇಣಿಗಳು ಸೀರೆಗೆ ಬಂಗಾರದ ಹೊಳಪುಳ್ಳ ಅಂಚಿನಂತೆಯೂ ಭೂದೇವಿ ಉಟ್ಟಿರುವ ಸೀರೆಯ ಅದ್ಭುತವಾದ ಹೊಸ ಪರಿಕಲ್ಪನೆಯನ್ನು ತಾನು ನಿರ್ಮಿಸ ಹೊರಟಿರುವ ವಿನ್ಯಾಸಗೊಳಿಸಲು ಊಹಿಸಿಕೊಂಡನು.

28. ಈ ರೀತಿಯಾಗಿ ಭೂರಮೆಗೆ ತನ್ನ ಊಹಾತ್ಮಕವಾದ ವಸ್ತ್ರವೈಭವವನ್ನು ನೋಡನೋಡುತ್ತಾ ತನ್ನ ಯೋಜಿತ ಕೆಲಸಕ್ಕೆ ಹೊಂದಿಸಿಕೊಳ್ಳ ಬಹುದಾದ ವಸ್ತ್ರ ನಿರ್ಮಾಣ ಪರಿಕಲ್ಪನೆಯ ಸೂತ್ರವನ್ನು ಮಾಡಿಕೊಂಡು ಬರುತ್ತಿರುವ ದೇವಲ ಮಹರ್ಷಿಯನ್ನು ನೋಡಿ ಐದು ಜನ ದುಷ್ಟ ರಾಕ್ಷಸರು ಷಡ್ಯಂತ್ರವನ್ನು ಮಾಡಿ ತಡೆದರು.

29. ಶ್ರೀಹರಿಯಿಂದ ವರವಾಗಿ ತಂದಿದ್ದ ತಂತು ಬೀಜವನ್ನು ಮೋಸದಿಂದ ಲಪಟಾಯಿಸಲು ಸುಳ್ಳಿನ ಷಡ್ಯಂತ್ರವನ್ನು ಮಾಡಿ ದುಷ್ಟಬುದ್ಧಿ

ದಾನವರು ದೇವಲ ಮಹರ್ಷಿಯನ್ನು ನಾನಾ ರೀತಿಯಾಗಿ ಕಾಡುತ್ತಿದ್ದರು.

30. ದುಷ್ಟ ಬುದ್ಧಿಯ ದಾನವರ ದುರಾಲೋಚನೆಯ ಸುಳಿವನ್ನು ಅರಿತ ದೇವಲ ಮಹರ್ಷಿಯು ತಂತು ಬೀಜವನ್ನು ದುಷ್ಟರಿಂದ ಕಾಪಾಡಿಕೊಳ್ಳಲು ಮತ್ತು ತನ್ನ ಯೋಜಿತ ಕಾರ್ಯಕ್ಕೆ ಸಂಕಲ್ಪ ಹಂತದಲ್ಲೇ ದುರುಳರಿಂದ ಬಂದೊದಗಿರುವ ವಿಘ್ನ ನಿವಾರಣೆಗಾಗಿ ಆದಿಶಕ್ತಿ ಪಾರ್ವತಿಯಾದ ಶಂಕರಿಗೆ ಮೊರೆಹೋದನು.



31. ಎಲ್ಲಾ ರೀತಿಯ ವಿದ್ಯೆಯನ್ನು ದಯಪಾಲಿಸುವ ಸರಸ್ವತಿಯು ನೀನೇ ಆಗಿರುವೆ, ಸಕಲ ಸಂಪತ್ತನ್ನು ಕೊಡುವಂತ ಮಹಾಲಕ್ಷ್ಮಿಯು ನೀನೇ ಆಗಿರುವೆ, ಎಲ್ಲಾ ಶುಭ ಕಾರ್ಯಗಳ ಪೂಜಿತೆ ಮಂಗಳಗೌರಿ ಯಾಗಿಯೂ ಕಾರ್ಯಸಿದ್ಧಿ ಶಕ್ತಿ ದೇವತೆಯಾಗಿಯೂ ನೀನೇ ಆಗಿರುವೆ.

32. ಎಲ್ಲಾ ಯಜ್ಞಗಳ ಮೂಲ ದೇವತೆಯು, ಪಂಚಭೂತಗಳ ಸ್ವರೂಪವಾದ (ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ) ಗಾಯತ್ರಿ ದೇವತೆಯು ನೀನೇ ಆಗಿರುವೆ, ಪ್ರತಿ ಯಜ್ಞದ ಮಂತ್ರದ ಮೂಲವಾಗಿರುವ ಗಾಯತ್ರಿ ಸೂತ್ರವು ಸಹ ಗಾಯತ್ರಿ ಛಂದಸ್ಸಿನಿಂದ ಆಗಿರುವಂತದ್ದಾಗಿದೆ.

33. ದೇವಾನುದೇವತೆಗಳು ಋಷಿಮುನಿಗಳು ಹರಿಹರ ಬ್ರಹ್ಮಾದಿಗಳು ಧ್ಯಾನಮಾಡುವ ಪ್ರಣವ ಮಂತ್ರ "ಓಂ"ಕಾರದ ಝೇಂಕಾರ ನಾದದ "ಅ ಉ ಮ" ಕಾರವು ಸಹ ನೀನೇ ಆಗಿದ್ದೀಯೆ.

34. ಈ ಜಗತ್ತಿನ ಎಲ್ಲವುದಕ್ಕೂ ಪ್ರಾರಂಭವು ನೀನೆ ಆಗಿರುವೆ ಮತ್ತು ಅದರ ಕೊನೆಯು ನೀನೇ ಆಗಿರುವೆ ಅಷ್ಟೇ ಅಲ್ಲದೆ ಪ್ರಾರಂಭ ಮತ್ತು ಕೊನೆಗಳ ನಡುವಿನ ಅಂತರವೂ ನೀನೇ ಆಗಿರುವೆ. ಈ ಆರಂಭ ನಡುವಿನ ಮತ್ತು ಅಂತ್ಯಗಳ ಎಲ್ಲೆಯನ್ನು ಮೀರಿದ ಹಾಗೂ ಎಲ್ಲಾ ಕಾಲಗಳಲ್ಲಿಯೂ ಸದಾ ಸ್ಥಿತಳಾಗಿರುವಂತಹ ಶಾಶ್ವತಳೂ ಆದ ಪರಾಶಕ್ತಿಯು ನೀನೇ ಆಗಿರುತ್ತೀಯೆ.

35. ನಮ್ಮ ಕಣ್ಣಿಗೆ ಕಾಣುವ ಸೂರ್ಯ ಮತ್ತು ಅವನನ್ನು ಸುತ್ತುವ ಈ ಭೂಮಿ ಮೊದಲುಗೊಂಡು ಚಂದ್ರ , ತಾರೆಗಳು, ಗ್ರಹಗಳು, ಉಪಗ್ರಹಗಳು ಇಂತಹ ಅನೇಕ ಆಕಾಶಕಾಯಗಳು ಸೇರಿ ಒಂದು ಸೂರ್ಯ ಪುಂಜವಾಗಿದ್ದರೆ ಇಂತಹ ಕೋಟ್ಯಾನುಕೋಟಿ ಸೂರ್ಯ ಪುಂಜಗಳನ್ನು ನಿನ್ನ ವ್ಯಾಪ್ತಿ ಮಡಿಲಿನಲ್ಲಿ ಇರುವಂತಹವುಗಳಾಗಿವೆ. ಈ ಭೂಮಿ ಮೊದಲಾದ ಇಡೀ ಬ್ರಹ್ಮಾಂಡವು ನಿನ್ನ ಆಜ್ಞೆಯಂತೆ ನಡೆಯುತ್ತಿದೆ.

36. ಬೇಕಿದ್ದರೂ ಬೇಡವೆನಿಸುವ (ಉಪೇಕ್ಷೆ) ಉದಾಸೀನ ಭಾವಕ್ಕೂ, ಬೇಡವೇ ಬೇಡವೆಂಬ (ನಿರಪೇಕ್ಷೆ) ತಿರಸ್ಕಾರ ಭಾವಕ್ಕೂ, ಬೇಕಾಗಿರುವುದನ್ನೇ ಪಡೆದುಕೊಳ್ಳುವ (ಸಾಪೇಕ್ಷೆ) ಮಹದಾಶಾ ಭಾವಕ್ಕೂ ಈ ರೀತಿಯ ಎಲ್ಲಾ ಭಾವನಾ ಸ್ಥಿತಿಗಳಿಗೂ ಮತ್ತು ಭಾವನಾತೀತ ಸ್ಥಿತಿಗಳಿಗೂ ಕಾರಣೀಭೂತಳು ಮತ್ತು ಸಾಕ್ಷೀಭೂತಳೂ ಆಗಿರುವವಳೂ ಹಾಗೂ ನಿರ್ಭಾವುಕಳೂ, ನಿರಾಕಾರಳೂ ಆಗಿಯೂ ಭಕ್ತರ ಆರಾಧನೆಗೆ ಸಾಕಾರ ರೂಪಳೂ ಆಗಿದ್ದೀಯೆ.

37. ಮನುಷ್ಯನಿಂದ ಹಿಡಿದು ಮೃಗಗಳು, ಪಕ್ಷಿಗಳು, ಕೀಟಗಳು ಹೀಗೆ ಜಗತ್ತಿನ ಎಲ್ಲಾ ಜೀವಿಗಳಲ್ಲೂ ತಾಯಿ ಜೀವವೇ ತನ್ನ ಮರಿ ಜೀವಿಗಳಿಗೆ ಹುಟ್ಟು ನೀಡುವುದು, ಪಾಲನೆ ಮಾಡುವಂತಹ ವಾತ್ಸಲ್ಯ ಮೂರ್ತಿಯು ತಾಯಿಯೇ ಆಗಿರುತ್ತಾಳೆ. ಹಾಗೆಯೇ ಈ ಜಗತ್ತು ಸೃಷ್ಟಿಯಾಗಿರುವುದಾಗಲೀ, ಇಂದಿಗೂ ನಡೆಯುತ್ತಿರುವುದಾಗಲೀ, ಮುಂದೆಯೂ ನಡೆಯುವುದು ಆಗಲೀ ಅದು ಏಕಮಾತ್ರ ಜಗನ್ಮಾತೆಯಾದ ನಿನ್ನಿಂದಲೇ ಆಗಿರುತ್ತದೆ.

38. ಈ ಜಗತ್ತಿನ ಎಲ್ಲಾ ಜೀವ-ಜಡ, ಅಣು-ರೇಣು ತೃಣ-ಕಾಷ್ಟಗಳ ಸೃಷ್ಟಿಗೆ ಮೂಲ ಶಕ್ತಿಯು ನೀನೆ ಆಗಿರುವೆ. ಅವರವರ ಭಕ್ತಿ ಭಾವನೆಗಳಿಗೆ ನಾನಾ ಹೆಸರುಗಳಿಂದಲೂ ನಾನಾ ರೂಪಗಳಿಂದ ಆರಾದಿಸಲ್ಪಡುವ ನೀನು ಅವರವರ ಇಷ್ಟದ ರೂಪದಲ್ಲಿಯೇ ಬಂದು ಅನುಗ್ರಹಿಸುವಂತಹ ಶಕ್ತಿರೂಪಳು ಆಗಿದ್ದೀಯೆ.

39. ಹೀಗೆಲ್ಲಾ ಶಂಕರಿಯನ್ನು ಕೊಂಡಾಡಿ ಸ್ಮರಣೆ ಮಾಡುತ್ತಾ ಕಾಡಿನ ಮಧ್ಯೆ ದೇವಲ ಮಹರ್ಷಿಯು ಅತ್ಯಂತ ನಿಷ್ಠೆಯಿಂದ ತಪಸ್ಸನ್ನು ಮಾಡಿ ಪರಾಶಕ್ತಿಯು ಆದ ಪರಶಿವೆ ಪಾರ್ವತಿಯ ಅನುಗ್ರಹವನ್ನು ಬೇಡಿದನು.

40. ದೇವಲ ಯತಿವರನ ಭಕ್ತಿಗೆ ಒಲಿದು ವನ ಅಥವಾ ಬನದಲ್ಲಿಯೇ ಬಂದು ಶಂಕರಿಯು ಬನದ ಶಂಕರಿ ಅಥವಾ ಬನಶಂಕರಿಯ ಹೆಸರಿ

ನಿಂದ ಪ್ರಕಟವಾಗಿ ಮಹರ್ಷಿಯ ಸಂಕಲ್ಪಕಾರ್ಯವು ಯಶಸ್ವಿಯಾಗಲೆಂದು ಅನುಗ್ರಹ ಪೂರ್ವಕವಾಗಿಯೂ ಶರಣಾಗತ ರಕ್ಷಕಳಾಗಿ ನಿಂತಳು.

41. ದೇವಲ ಮಹರ್ಷಿಯ ಕಾರ್ಯ ಸಂಕಲ್ಪಕ್ಕೆ ಕಂಟಕಪ್ರಾಯರಾಗಿ ತಂತು ಬೀಜವನ್ನು ಕಸಿಯಲು ಬಂದಿದ್ದ ಆ ಐದು ಜನ ರಾಕ್ಷಸರ ರುಂಡ ಚೆಂಡಾಡಿ ಸಂಹರಿಸಿ ಚೌಡೇಶ್ವರಿ ಎಂಬ ಹೆಸರಿನಿಂದ ವಿಜೃಂಭಿಸಿದಳು.

42. ದೇವಲ ಮಹರ್ಷಿಯ ಶ್ರದ್ಧಾಭಕ್ತಿಗೆ ಪ್ರಸನ್ನಳಾಗಿ ಮಹರ್ಷಿಯ ನಿತ್ಯ ಪೂಜಾರ್ಚನೆಗೆ ಪೂರ್ಣಕುಂಭ ಕಳಸ ರೂಪದಲ್ಲಿ ದೇವಿಯು ಸಾಕಾರ ಮೂರ್ತಿಯಾಗಿ ನಿಂತಳು. ದುರುಳರನ್ನು ಸಂಹರಿಸಿ ದೇವಲನ ವಸ್ತ್ರ ನಿರ್ಮಾಣ ಕಾರ್ಯವು ನಿರ್ವಿಘ್ನವಾಗಿ ನಡೆಯಲು ಮತ್ತು ಶರಣಾಗಿ ಬಂದ ಭಕ್ತ ಜನರೆಲ್ಲರನ್ನು ಸಲಹುತ್ತಿರುವಳು.



43. ಶಿವನು ದೇವಲ ಮಹರ್ಷಿಗೆ ನೀಡಿದ ಆಜ್ಞೆಯ ಅನುಗುಣವಾಗಿ ವಿಷ್ಣುವಿನ ಕರುಣೆಯಿಂದ ತಂತು ಬೀಜವನ್ನು ಪಡೆದು ಬಂದು ಸಂಕಲ್ಪ ಕಾರ್ಯಸಿದ್ಧಿಗಾಗಿ ಮತ್ತು ವಿಘ್ನನಿವಾರಣೆಗಾಗಿ ಶಂಕರಿಯ ಅನುಗ್ರಹವನ್ನು ಪಡೆದದ್ದು ಲೋಕಕಲ್ಯಾಣಾರ್ಥವಾಗಿಯೇ ಆದ ಕಾರಣ ಮುಂದೆ ಕಾರ್ಯೋನ್ಮುಖನಾದ ದೇವಲನು ಮಯನಲ್ಲಿ ವಸ್ತ್ರ ನಿರ್ಮಾಣಕ್ಕೆ ಬೇಕಾದ ತಂತ್ರ ಸಲಕರಣೆಗಳನ್ನು ತರಲು ಹೊರಟನು.

44. ವೇದ ಶಾಸ್ತ್ರಗಳನ್ನು ಬಹಳವಾಗಿ ಅಧ್ಯಯನ ಮಾಡಿ ವೇದಾಂಗಗಳಾದ ಶಿಕ್ಷ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು ಮತ್ತು ಜ್ಯೋತಿರ್ ಶಾಸ್ತ್ರಗಳನ್ನು ಚೆನ್ನಾಗಿ ತಿಳಿದಿರುವಂತ ಸಕಲ ವಿದ್ಯಾ ಪಾರಂಗತನೂ, ಸದ್ಗುಣ ಸಂಪನ್ನನೂ ಆದ ಯತಿವರನೇ ನನ್ನ ಕೋರಿಕೆಯನ್ನು ಆಲಿಸುವಂತವನಾಗು.

45. ಜ್ಯೋತಿರ್ ಶಾಸ್ತ್ರದ ಮೂಲವಾದ ಸೂರ್ಯ ಸಿದ್ಧಾಂತವನ್ನು ಸೂರ್ಯನ ಉಪಾಸನೆಯ ಫಲವಾಗಿ ಸಾಕ್ಷತ್ ಸೂರ್ಯನಿಂದಲೇ ಪಡೆದಂತಹ ಮಯನೇ ನಿನಗೆ ನನ್ನ ವಂದನೆಗಳು.

46. ಜ್ಯೋತಿರ್‌ಶಾಸ್ತ್ರ, ಶಿಲ್ಪಶಾಸ್ತ್ರ, ಮಂತ್ರವಿದ್ಯೆ ತಂತ್ರವಿದ್ಯೆ ಈ ಶಾಸ್ತ್ರಗಳಲ್ಲೆಲ್ಲಾ ಪ್ರಾವೀಣ್ಯತೆ ಪಡೆದ ದಿತಿಯ ಮಕ್ಕಳಲ್ಲಿ ಶ್ರೇಷ್ಠ ದೈವಜ್ಞನು ಆಗಿದ್ದೀಯೇ.

47. ನಯ ನಾಜೂಕಾದ ನೇಯ್ಗೆಯ ಕೆಲಸಕ್ಕೆ ಬೇಕಾದಂತಹ ಸೂಕ್ತ ತಾಂತ್ರಿಕ ಉಪಕರಣಗಳನ್ನು ದಯಪಾಲಿಸು ಎಂದು ದೇವಲನು ವಿನಮ್ರವಾಗಿ ವಿನಂತಿಸಿದಾಗ ಮಯನು ಬಹಳ ಗೌರವದರಗಳಿಂದ ಕೊಡ ಮಾಡುತ್ತಾನೆ.

48. ವಸ್ತ್ರದ ನಿರ್ಮಾಣಕ್ಕೆ ಮುಖ್ಯವಾಗಿ ಬೇಕಾದಂತಹ ತಾಂತ್ರಿಕ ಉಪಕರಣಗಳಾದ ಮರದ ಪಟ್ಟಿಗಳು, ಹಾಸಿನ ನೂಲು ಎಳೆಗಳನ್ನು ಕಟ್ಟಲು ಗಳ, ಗಳವನ್ನು ಕಟ್ಟಲು ಹಗ್ಗ, ಹಾಸಿನ ದೋಣ್ಣೆಯ ಹಗ್ಗದಿಂದ ಕಟ್ಟಲು ಆಯಾ ಮೂಲೆಗಳಲ್ಲಿ ಇರಿಸಲು ಗೂಟ, ಹಾಸಿನ ಎಳೆಗಳನ್ನು

ಎಂಗಡಿಸಲು ಅಣಿಕೋಲು ಸಲಗೆಗಳು, ಹಾಸಿನ ಎಳೆಗಳನ್ನು ತಟ್ಟಿನ ಒಳಗೆ ಎಳೆದುಕೊಳ್ಳಲು ಸಣ್ಣ ಮುಳ್ಳು ಕಡ್ಡಿಯಿಂದ ಮಾಡಿದಂತಹ ಉಪಕರಣವೇ ಊಸಿ, ನೇಯಲು ಜೊತೆ ಲಾಳಿಗಳು, ಗಣಿಕೆಗಳು, ಅಚ್ಚನ್ನು ತೂಗು ಹಾಕಲು ದೊಣ್ಣೆ, ನೇಯ್ದ ಸೀರೆಯನ್ನು ಅಥವಾ ವಸ್ತ್ರವನ್ನು ಸುತ್ತಿಕೊಳ್ಳುವ ದಿಮ್ಮಿಯೇ ಕುಂಟೆ, ಬಟ್ಟೆಯ ಎರಡು ಅಂಚುಗಳನ್ನು ಬಿಗಿಯಾಗಿ ಎಳೆದು ಹಿಡಿದಿಡುವ ಮುಳ್ಳುಗಳನ್ನು ಹೊಂದಿರುವ ಉಪಕರಣ, ತೂಗುಹಾಕಿದ ಅಚ್ಚುಗಳಿಂದ ದಾಯ ಮೂಡಿಸಿ ಕ್ರಮಬದ್ಧವಾಗಿ ಕುಣಿಸಲು ಮಗ್ಗದ ಕೆಳಬದಿಗೆ ಹೊಂದಿಸಿ ಕಟ್ಟಿರುವ ಮಗ್ಗದ ಗುಂಡಿಯಲ್ಲಿ ಇರಿಸಿರುವ ಹಾವ್ಗೆಯ ಚೆಕ್ಕೆಗಳು.

49. ನೂಲಿನ ಎಳೆಗಳ ಲಡಿಯನ್ನು ಹಾಕಲು ಗುಪ್ಪು ಅದರಿಂದ ನೂಲನ್ನು ಸುತ್ತಿಕೊಳ್ಳಲು ಅರಟೆ ಇವರಿಂದ ಎಳೆಯನ್ನು ಕಂಡಿಕೆಗೆ ಸುತ್ತಲು ರಾಟೆ, ಕದಿರು, ತಟ್ಟಿಗೆ ಬೇಕಾದ ಬಿದಿರು ಕಡ್ಡಿಗಳು ನೇಯ್ಗೆಯಲ್ಲಿ ಲಾಳಿಯಿಂದ ಬಂದ ಎಳೆಯನ್ನು ತಳ್ಳಿ ನೇಯಲು ಶಿಲೆಪಟ್ಟಿ, ಪೇಟದ ಹಲಗೆ, ನೂಲು ತೆಗೆಯಲು ಚರಕ, ಅಚ್ಚುಗಳನ್ನು ಮಾಡಲು ಬೇಕಾದ ದಬ್ಬೆ ಕೋಲುಗಳು.

50. ಮಗ್ಗದ ಸಲಕರಣೆಗಳನ್ನು ಪಡೆದ ದೇವಲ ಮುನಿಯು ಮಯನಿಗೆ ಧನ್ಯವಾದ ಪೂರ್ವಕವಾಗಿ ನಮಸ್ಕರಿಸಿ ಶಿವನಾಜ್ಞೆಯನ್ನು ಪೂರೈಸುವ ಹೊಣೆಗಾರಿಕೆಯಿಂದ ಮುಂದೆ ಹೊರಟನು.



51. ನೂಲಿನ ಎಳೆಗಳನ್ನು ತೆಗೆಯಲು ಚರಕ ಮತ್ತು ವಸ್ತ್ರ ನೇಯಲು ಮಗ್ಗವನ್ನು ಕಟ್ಟಿ ಇರಿಸಿ ತಂತು ಬೀಜದಿಂದ ಹತ್ತಿ ನೂಲನ್ನು ನೂಲುತ್ತ ಜನರಿಗೆ ಬೇಕಾದ ಸೂತ್ರವನ್ನು ಮತ್ತು ವಸ್ತ್ರಗಳನ್ನು ತಯಾರು ಮಾಡಲು ಸಿದ್ಧನಾದ.

52. ಪ್ರಕೃತಿಗೆ ಅನುಗುಣವಾಗಿ ಸಂಸ್ಕೃತಿಯನ್ನು ಮತ್ತು ಸಂಸ್ಕಾರವನ್ನು ಮನುಜರಿಗೆ ನೀಡಿ ಮನುಷ್ಯನ ಮನೋವಿಕಾರ ಅಥವಾ ವಿಕೃತ ಮನೋಭಾವವನ್ನು ಕಳೆಯುವಂತ ಆಚಾರ ಸಂಹಿತೆಯನ್ನು ಹೇಳಿಕೊಟ್ಟು ರೂಢಿಸಿ, ಜ್ಞಾನಸಿದ್ಧಿಗೆ ಸಾಧನವಾದುದೇ ಸೂತ್ರ ಅಥವಾ ಉಪವೀತ ಅಥವಾ ಜನಿವಾರ ಅಥವಾ ಯಜ್ಞೋಪವೀತ ಎಂದೆಲ್ಲಾ ಹೇಳುವಂತದ್ದಾಗಿದೆ.

53. ಇಲ್ಲಿ ಪ್ರಕೃತಿಗನುಗುಣವಾಗಿ ಸಂಸ್ಕೃತಿಯನ್ನು ನೀಡಿ ವಿಕೃತಿ ಕಳೆಯುವುದು ಎಂಬುದಕ್ಕೆ ಸರಳವಾಗಿ ಉದಾಹರಿಸಬಹುದಾದರೆ - ಬಾಳೆಯ ಹಣ್ಣನ್ನು ಸಿಪ್ಪೆಯ ಸಹಿತವಾಗಿ ತಿನ್ನುವುದು ಪ್ರಕೃತಿ ವಿಧಾನವಾದರೆ ಹಣ್ಣಿನ ಸಿಪ್ಪೆಯನ್ನು ತೆಗೆದು ತಿನ್ನುವುದು ಸಂಸ್ಕೃತಿ ವಿಧಾನ ಆಗಿರುತ್ತದೆ. ಆದರೆ ಹಣ್ಣನ್ನು ಕೊಳೆಸಿ ಅದರಿಂದ ಕಳ್ಳಬಟ್ಟಿಯನ್ನು ತಯಾರಿಸಿ ಅದನ್ನು ಕುಡಿಯುವುದೇ ವಿಕೃತಿ ವಿಧಾನ ಆಗಿರುತ್ತದೆ.

54. ಉಪವೀತ ಅಥವಾ ಯಜ್ಞೋಪವೀತ ಧಾರಣೆ ಮಾಡಿ ಇಷ್ಟದೇವತೆ ಅಥವಾ ಕುಲದೇವತೆಯ ನಿತ್ಯ ಪೂಜಾರ್ಚನೆ ಮಾಡುವುದು ಧಾರ್ಮಿಕ ಆಚರಣೆ ಮಾಡುವುದರಿಂದ ಮನುಷ್ಯನಿಗೆ ನೈತಿಕ ಬಲ ಹೆಚ್ಚಾಗುವುದಲ್ಲದೆ ಮನುಷ್ಯನ ಮರ್ಕಟ ಬುದ್ಧಿಯನ್ನು ಹಿಡಿದು ನಿಲ್ಲಿಸುವಂತ ಮನಸ್ಸಿನ ಹೊಯ್ದಾಟಗಳಿಗೆ ಅಂಕುಶವಿರಿಸಿ ಸದ್ಬುದ್ಧಿಯನ್ನು ಪ್ರಚೋದಿಸುತ್ತದೆ.

55. ಉಪನಯನ ಆದ ಮೇಲೆ ಬ್ರಹ್ಮಚರ್ಯದ ಕರ್ಮಪ್ರಧಾನ ಜೀವನಕ್ಕೆ ಒಂದು ಗಂಟಿನ ಜನಿವಾರವನ್ನು , ವಿವಾಹಿತನಾದ ವ್ಯಕ್ತಿಯು ಸಂಸಾರ

ಜೀವನದಲ್ಲಿ ಕರ್ಮದ ಜೊತೆಯಲ್ಲಿ ಧರ್ಮವನ್ನು ಅನುಸರಿಸಲು ಎರಡು ಗಂಟಿನ ಜನಿವಾರವನ್ನು ಮತ್ತು ಸಂಸಾರ ಜೀವನದ ಕರ್ಮ ಮತ್ತು ಧರ್ಮಗಳ ಜವಾಬ್ದಾರಿಯನ್ನು ನಿಭಾಯಿಸಿ ಮೋಕ್ಷಕ್ಕಾಗಿ ಜ್ಞಾನಮಾರ್ಗದಲ್ಲಿ ಸಾಗುವುದಕ್ಕೆ ಮೂರು ಗಂಟಿನ ಜನಿವಾರವನ್ನು ಧರಿಸಿ ನಿತ್ಯ ಸಂಧ್ಯಾವಂದನೆ, ಜಪ, ತಪ ಮತ್ತು ಪೂಜಾರ್ಚನೆ ಮಾಡುವುದರಿಂದ ಯಶಸ್ಸನ್ನು ಕಾಣುತ್ತಾರೆ.

56. ಕರ್ಮ, ಧರ್ಮ, ಜ್ಞಾನ ಈ ಮೂರು ಕ್ರಿಯೆಗಳನ್ನು ಸಂಕೇತಿಸುವ ಮೂರು ಗಂಟುಗಳಿಗೂ ಅಥವಾ ಪ್ರತಿ ಮೂರು ಕ್ರಿಯೆಗಳಿಗೂ ಸತ್ವ, ರಜೋ, ತಮ ಎಂಬ ಗುಣಗಳ ಪ್ರಭಾವದ ಸೆಳೆತವಿರುವುದೇ ಪ್ರತಿ ಗಂಟಿನಲ್ಲೂ ಇರುವ ಮೂರು ದಾರಗಳು ಪ್ರತಿಕ್ರಿಯೆಗಳಿಗೂ ಮೂರು ಗುಣಗಳ ಪ್ರಭಾವ ಸೆಳೆತವಿರುವುದರಿಂದ ಪ್ರತಿಯೊಂದು ಕ್ರಿಯಾ ಗಂಟಿಗೂ ಮೂರು ಗುಣಸೆಳೆತದ ಮೂರು ನೂಲೆಳೆಯಂತೆ ಲೆಕ್ಕದಲ್ಲಿ ಒಟ್ಟು ಒಂಬತ್ತು ನೂಲಿನ ಎಳೆಗಳು ಇರುತ್ತವೆ.

57. ಜಗತ್ತಿನ ಸೃಷ್ಟಿಗೆ ಮೂಲವಾದ ಆಕಾಶ, ಗಾಳಿ, ಬೆಂಕಿ, ನೀರು, ಭೂಮಿ ಈ ಪಂಚಭೂತಗಳಿಗೆ ಸತ್ವ, ರಜೋ, ತಮಗಳ ಪ್ರಭಾವ ಸೆಳೆಯುವಂತಹ ಆ ಮೂರರ ಮುಖಾಂತರವೇ ನಮ್ಮ ಕರ್ಮ, ಧರ್ಮ, ಜ್ಞಾನ ಕ್ರಿಯೆಗಳಲ್ಲಿ ಸಿದ್ಧಿ ಪಡೆಯಲು ಪ್ರಗತಿಪರನಾಗುವಂತೆ ಶಕ್ತಿಯನ್ನು ದಯಪಾಲಿಸು ಎಂದು ಪ್ರಾರ್ಥಿಸಬೇಕು.

58. ಹೀಗೆ ಕರ್ಮಸಿದ್ಧಿ, ಧರ್ಮಸಿದ್ಧಿ, ಜ್ಞಾನಸಿದ್ಧಿ ಈ ಮೂರರ ಸಿದ್ಧಿಗಾಗಿ ಒಂದು ಸರಳ ಸೂತ್ರವನ್ನು ಜನರಿಗೆ ದೇವಲ ಮಹರ್ಷಿಯು ಕೊಡುವುದರೊಂದಿಗೆ ಮಾನವನ ಮಾನ ಸಂರಕ್ಷಣೆಗೆ ಬಟ್ಟೆಯನ್ನೂ ಸಹ ಕೊಡಲು ಮುಂದಾದನು.

59. ನಡುಮನೆಯ ಒಂದು ಬದಿಯಲ್ಲಿ ಸೊಂಟ ಮಟ್ಟದ ಗುಂಡಿಯನ್ನು ತೆಗೆದು ಅದರಲ್ಲಿ ಮಗ್ಗವನ್ನು ಅಳವಡಿಸಿ ಗುಂಡಿಯಲ್ಲಿ ಅಳವಡಿಸಿದ

ಹಾವ್ಗೆ ಚೆಕ್ಕೆಗಳನ್ನು ಮೀಟಿ ತುಣಿದಾಗ ಇದಕ್ಕೆ ಹೊಂದಿಸಿ ಕಟ್ಟಿದಂತಹ ನಾಲ್ಕು ಅಚ್ಚುಗಳು ಮೇಲಕ್ಕೂ ಕೆಳಕ್ಕೂ ಕುಣಿಯುತ್ತಿದ್ದವು.

60. ಅಚ್ಚುಗಳು ಮೇಲೆ ಕೆಳಗೆ ಆಡುವಾಗ ಮೇಲಿನ ಅಚ್ಚು ಮತ್ತು ಕೆಳಕ್ಕೂ ಕೆಳಗಿನ ಅಚ್ಚು ಮೇಲಕ್ಕೂ ಬಂದಂತಹ ಅಚ್ಚುಗಳ ಮುಖಾಂತರ ಬರುವ ಹಾಸಿನ ನೂಲೆಳೆಗಳ ನಡುವೆ ಲಾಳಿ ಹಾಯುವಷ್ಟು ದಾಯದ ಸ್ಥಳಾವಕಾಶದಲ್ಲಿ ಹೊಕ್ಕಿದ ಲಾಳಿಯಲ್ಲಿನ ತುಂಬಿದ ಕಂಡಿಕೆಯ ನೂಲೆಳೆಯು ಹಾಸಿನ ನೂಲೆಳೆಗಳ ಅಣಿಯಲ್ಲಿ ಬೆರೆತು ಬಟ್ಟೆಯು ಮೂಡುತ್ತದೆ.

61. ಹಾಸಿನ ಮತ್ತು ಹೊಕ್ಕಿನ ಬಣ್ಣ ಬಣ್ಣದ ನೂಲೆಳೆಗಳು ಕೂಡಿ ನೇಯ್ದ ಬಟ್ಟೆಯಲ್ಲಿ ಹೂವು, ಬಳ್ಳಿಯಂತಹ ಕುಸುರಿ ಕೆಲಸಗಳಿಂದ ಕೂಡಿದ ಚಿತ್ತಾರಗಳು ಮೂಡುವುದಲ್ಲದೆ, ಚಿನ್ನದ ಎಳೆಗಳಿಂದ ಸೀರೆಯ ಅಂಚಿನಲ್ಲಿ ಮೂಡಿದ ಗಿರಿ ಶೃಂಗಗಳಂತ ಸಾಲುಗಳು ಬೆರಗುಗೊಳಿಸು ವಂತಹ ಆಕರ್ಷಕದಿಂದ ಕೂಡಿದ್ದವು.

62. ದೇವಲ ಮಹರ್ಷಿಯು ಭಕ್ತಿ ಮತ್ತು ಶ್ರದ್ಧೆಯಿಂದ ಮಗ್ಗವನ್ನು ನೇಯುತ್ತಿರಬೇಕಾದರೆ ಹಾಸಿನ ಎಳೆಗಳು ಶಿವನ ಆದೇಶದಂತೆ ಸಾಗಿ ಬರುತ್ತಿದ್ದರೆ ಹೊಕ್ಕಿನ ಎಳೆಯಿಂದ ಕೂಡಿದ ಮಗ್ಗದ ಪ್ರತಿ ವಾಟಕ್ಕೂ ದೇವಿಯ ಶ್ರೀ ರಕ್ಷೆಯು ತಥಾಸ್ತು ತಥಾಸ್ತು ಎನ್ನುತ್ತಾ ನೇಯ್ಗೆ ಕಾಯಕ ಸಾಗುತ್ತಿತ್ತು.

63. ಗಿಡ ಮರಗಳ ಎಲೆ, ನಾರು ಮಡಿಗಳು ಹರಿದು ಹೋದಾಗ ಅಥವಾ ಮುರಿದು ಹೋದಾಗ ಅದನ್ನು ಉಟ್ಟಿರುವಂತಹ ನರನಾರಿಯರು ಮಾನಕ್ಕೆ ಅಂಜಿ ನಾಚಿಕೊಳ್ಳುತ್ತಾ ಮುಜುಗರದ ಮನಸ್ಥಿತಿಯಲ್ಲಿಯೇ ಬದುಕನ್ನು ದೂಡುತ್ತಿದ್ದರು.

64. ಬಹಳ ಜೋಪಾನವಾಗಿ ಕಾಯ್ದಿರಿಸಿಕೊಳ್ಳಬೇಕಾದಂತಹ ಮಾನವರ ಶೀಲವನ್ನು ಕಾಪಾಡಲು ಮನುಜರ ಮುಜುಗರದ ಬದುಕನ್ನು ದೂರ

ಮಾಡಲು ಬಹಳ ಉತ್ಸುಕನಾಗಿ ಸಡಗರದಿಂದ ಸಮಯ ವ್ಯರ್ಥ ವಾಗದ ರೀತಿ ನೇಯ್ಗೆ ಕಾಯಕದಲ್ಲಿ ದೇವಲನು ತೊಡಗಿಸಿಕೊಂಡನು.

65. ಪುರುಷರಿಗೆ ವಸ್ತ್ರಗಳನ್ನು ಮಹಿಳೆಯರಿಗೆ ಹೂವು ಬಳ್ಳಿ ಮುಂತಾದ ಅನೇಕ ಚಿತ್ರಗಳಿಂದ ಕೂಡಿದ ವಸ್ತ್ರಗಳನ್ನು ವಿನ್ಯಾಸ ಮಾಡಿ ಜನರಿಗೆ ನೀಡಿದಾಗ ಅಂತಹ ವರ್ಣ ರಂಜಿತವಾದ ಚಿತ್ರ ಕೌಶಲ್ಯಪೂರ್ಣವಾದ ವಸ್ತ್ರಗಳನ್ನು ಧರಿಸಿದಂತಹ ಜನರ ಆನಂದಕ್ಕೆ ಪಾರವೇ ಇಲ್ಲದಂತಾಗಿ ದೇವಲ ಮಹರ್ಷಿಗೆ ಕೃತಜ್ಞತಾ ಪೂರಕವಾಗಿ ವಂದಿಸಿದರು.

66. ಒಂದು ಉತ್ತಮ ಸಂಸ್ಕೃತಿಯುಳ್ಳ ಸಮಾಜಕ್ಕೆ ಸಂಸ್ಕಾರಯುಕ್ತ ಜನರು ಇರಬೇಕಾಗುತ್ತದೆ. ಅಂತಹ ಒಂದು ಸಂಸ್ಕಾರವನ್ನು ಜನರಲ್ಲಿ ಬೆಳೆಸಲು ಸೂತ್ರಗಳನ್ನು ಮತ್ತು ಮಾನವನಿಗೆ ಪ್ರಾಣದಷ್ಟೇ ಮುಖ್ಯ ವಾಗಿ ಕಾಯ್ದಿರಿಸಿ ಕೊಳ್ಳಬೇಕಾದ ಶೀಲವನ್ನು ಕಾಪಾಡಲು ಮತ್ತು ಒಂದು ಉತ್ತಮ ಬಾಹ್ಯಚಹರೆಗೆ ಗೌರವಪೂರ್ಣವಾದಂತಹ ವಸ್ತ್ರಗಳನ್ನು ದೇವಾನುದೇವತೆಗಳಿಗೆ, ಋಷಿಮುನಿಗಳಿಗೆ ಮೊದಲುಗೊಂಡು ಎಲ್ಲಾ ಜನರಿಗೂ ನೀಡುವ ಮೂಲಕ ಶಿವನ ಆಜ್ಞೆಯನ್ನು ದೇವಲ ಮಹರ್ಷಿಯು ಭಕ್ತಿಪೂರಕವಾಗಿ ಪೂರೈಸಿದನು.

67. ಆತ್ಮೋನ್ನತಿ ಸಾಧನೆಗೆ ಮತ್ತು ಸಂಸ್ಕಾರಯುಕ್ತ ಬದುಕಿಗೆ ಬೇಕಾದಂತಹ ಸೂತ್ರಗಳನ್ನು ಮತ್ತು ಗೌರವಪೂರ್ಣ ಭೂಷಣಪ್ರಾಯವಾದ ವಸ್ತ್ರ ಉಡುಗೆಗಳನ್ನು ಪಡೆದಂತಹ ಎಲ್ಲಾ ಜನರು, ದೇವತೆಗಳು, ಮುನಿವರ್ಯರು ದೇವಲ ಮಹರ್ಷಿಗೆ ಶಿರಬಾಗಿ ವಂದಿಸಿದರು.

68. ಅಜ್ಞಾನವನ್ನು ಅಳಿಸಿ ಸುಜ್ಞಾನವನ್ನು ಬೆಳೆಸಿಕೊಳ್ಳಲು ಧರ್ಮಪ್ರಜ್ಞೆ ಸದಾ ಜಾಗೃತವಾಗಿರಿಸಿಕೊಳ್ಳಲು ಉಪವೀತಾಚರಣೆ ಸಂಧ್ಯಾವಂದನೆ ನಿತ್ಯಪೂಜಾರ್ಚನೆಗಳನ್ನು ತಿಳಿಸಿಕೊಡುವುದರ ಜೊತೆಗೆ ಜಗತ್ತಿನ ಎಲ್ಲಾ ಜೀವಿಗಳಿಗಿಂತ ಅತಿ ಉತ್ತಮವಾದ ಜೀವಿಯಾದ ಮನುಷ್ಯನು ಮಾನ ಸಂರಕ್ಷಣೆ ಮಾಡಿಕೊಳ್ಳಲು ಬಟ್ಟೆಯನ್ನು ಕೊಡುವುದರ ಜೊತೆಗೆ ನೇಕಾರಿಕೆ ನೇಯುವ ವೃತ್ತಿಯನ್ನು ಮಾಡಿಕೊಂಡು ಬದುಕಲು ಕಲಿಸಿಕೊಟ್ಟು ಅನ್ನದಷ್ಟೇ ಅರಿವೆಯು ಕೂಡ ಬಹಳ ಪ್ರಮುಖವಾದು

ದೆಂದು ಜನರಿಗೆ ತೋರಿಸಿಕೊಟ್ಟ ದೇವಲ ಮಹರ್ಷಿಯು ಜಗದಾದಿನೇಕಾರನು ಪ್ರಕೃತಿಗೆ ಅನುಗುಣವಾದ ಧರ್ಮೋಚಿತವಾದ ನಾಗರೀಕತೆ ಮತ್ತು ಸಂಸ್ಕೃತಿಯನ್ನು ಜನರಲ್ಲಿ ಬೆಳೆಸಿದನು.

69. ಶಿವನ ಹಣೆಗಣ್ಣಿನ ದಿವ್ಯ ತೇಜಸ್ಸಿನಿಂದ ಉದಯಿಸಿದ ದಿವ್ಯ ತೇಜೋ ಮೂರ್ತಿ ದೇವಲ ಮುನಿವರನು ಜನರಿಗೆ ಇಹದ ಲೌಕಿಕ ಜೀವನದಲ್ಲಿ ಸದಾಚಾರವುಳ್ಳ ವೃತ್ತಿಯನ್ನು ಮಾಡಿಕೊಂಡು ಪಾರಮಾರ್ಥಿಕವಾಗಿ ಜ್ಞಾನ ಸಂಪಾದನೆಗೂ ಆತ್ಮಸಾಕ್ಷಾತ್ಕಾರಕ್ಕೂ ದಾರಿಯನ್ನು ತೋರಿಸಿ ಕೊಟ್ಟನು. ಮನುಷ್ಯನು ಸಮಾಜದ ಮಧ್ಯೆ ಜೀವನ ಮುಖಿಯಾಗಿ ಇದ್ದುಕೊಂಡೇ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವುದನ್ನು ತೋರಿಸಿ ಕೊಟ್ಟು ಈ ಜಗತ್ತಿಗೆ ಗುರುವಾದರು.

70. ಹರಿಯು ತಂತು ಬೀಜವನ್ನು ಅನುಗ್ರಹಿಸಿದರೆ ಮಯನು ಬಟ್ಟೆಯನ್ನು ತಯಾರಿಸಲು ಬೇಕಾದ ತಾಂತ್ರಿಕ ಉಪಕರಣಗಳನ್ನು ಕೊಡಮಾಡಿದ ಅನಂತರದ ವಿಘ್ನ ನಿವಾರಣೆಗಾಗಿ ಶಂಕರಿಯನ್ನು ಪ್ರಾರ್ಥಿಸಿದಾಗ ಆಕೆಯ ಶ್ರೀರಕ್ಷೆಯ ಕೃಪೆಯಿಂದ ಎಲ್ಲರಿಗೂ ಸೂತ್ರಗಳನ್ನು ಮತ್ತು ವಸ್ತ್ರಗಳನ್ನು ನೀಡುವುದರೊಂದಿಗೆ ಪರಶಿವನ ಆಜ್ಞೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದರು.

71. ಶಿವನ ಆಜ್ಞೆಯನ್ನು ಶಿರಸಾವಹಿಸಿ ನಿಷ್ಠಾಪೂರ್ಣವಾಗಿ ಯಶಸ್ವಿಯಾಗಿ ಪೂರೈಸಿದ ದೇವಲ ಮಹರ್ಷಿಗೆ ಪರಶಿವನು ಪ್ರಸನ್ನನಾಗಿ ನಂದಿಧ್ವಜ ಲಾಂಛನವನ್ನು ನೀಡುವುದರೊಂದಿಗೆ ಕೈವಲ್ಯ ಪದವಿಯನ್ನು ಪ್ರಧಾನ ಮಾಡಿದ.

72. ಅರಿವು (ಜ್ಞಾನ) ಅರಿವೆ (ಬಟ್ಟೆ) ಇವೆರಡನ್ನು ಸಂಪಾದಿಸಿಕೊಳ್ಳಲು ಮಾರ್ಗದರ್ಶಕನಾಗಿ ಜಗದಾದಿ ನೇಕಾರ ಗುರುವಾದಂತಹ ದೇವಲ ಮುನಿವರನಿಗೆ ಶರಣಾಗಿ ವಂದಿಸುತ್ತಾ ಜಯವಾಗಲಿ ಎಂದು ಮಂಗಳವನ್ನು ಹಾಡಿರಿ.

—o—

# ದೇವಾಂಗ ದೇವಲ ಮಹರ್ಷಿಯ ಗಾಯತ್ರಿ ಸೂತ್ರ

ಪಾಲಾಕ್ಷಜಾಯ ವಿದ್ಮಹೇ ।
ವಸ್ತ್ರ ಪುರುಷಾಯ ಧೀಮಹಿ ।
ತನ್ನೋ ದೇವಲಃ ಪ್ರಚೋದಯಾತ್ ॥ 1 ॥

ವಸ್ತ್ರ ಪುರುಷಾಯ ವಿದ್ಮಹೇ ।
ಸೂತ್ರ ಕರ್ತಾಯ ಧೀಮಹಿ ।
ತನ್ನೋ ದೇವಲ ಪ್ರಚೋದಯಾತ್ ॥ 2 ॥



## ದೇವಲ ಮಹರ್ಷಿಯ ಆರತಿ ಹಾಡುಗಳು

ಎತ್ತಿದರು ಆರತಿಯಾ
ದೇವಾಂಗದ ದೇವಲ ಮುನಿಗೇ
ಕೈಲಾಸದಿಂದ ಭುವಿಗಿಳಿದು ಬರುವಾಗ
ಎತ್ತಿದರು ಆರತಿಯಾ ||

ತಲೆಮೇಲೆ ಸುತ್ತಿರುವಾ ತುರುಬಿನ ಮುಡಿದಿಂಡು
ಹಣೆಯಲ್ಲಿ ವಿಭೂತಿ ಗಂಧ ಕುಂಕುಮವಿಟ್ಟ
ದೇವಲಗೆ ಆರತಿಯಾ ||

ಕೊರಳಲ್ಲಿ ರುದ್ರಾಕ್ಷಿಯ ಹೆಗಲಿಂದ ಜನಿವಾರವೂ
ಕೈಯಲ್ಲಿ ವಸ್ತ್ರ ಕಮಂಡಲವ ಹಿಡಿದಿರುವ
ದೇವಲಗೆ ಆರತಿಯಾ ||

ಜಗಕೆಲ್ಲಾ ನೀಡಿದನು ಸೂತ್ರ ವಸ್ತ್ರಗಳನು
ಶಿವನಿಂದ ನಂದಿಧ್ವಜ ವರವಾಗಿ ಪಡೆದಂತ
ದೇವಲಗೆ ಆರತಿಯಾ ||



## ಆರತಿ ಹಾಡು

ಆರತಿಯ ಮಾಡು ಬಾರೈ
ದೇವಲ ಯತಿವರೆಗೆ
ದೇವಾಂಗದ ಮೂಲ ಪುರುಷನಿಗೆ ॥

ಹರನಣೆಗಣ್ಣಿಂದ ಉದಿಸಿ ಬಂದವಗೆ
ಹರಿಯಿಂದ ತಂತುವ ಪಡೆದು ತಂದವಗೆ ॥

ಹರನಾಣತಿ ಪಾಲಿಸಲೆಂದು ಧರೆಗೆ ಇಳಿದವಗೆ
ಶಂಕರಿಯ ಕೃಪೆಯಿಂದ ಸಿದ್ಧಿ ಪಡೆದವಗೆ ॥

ಮಾನ ಸಂಸ್ಕಾರದ ವಸ್ತ್ರದಾತನಿಗೆ
ಆತ್ಮ ಸಾಕ್ಷಾತ್ಕಾರದ ಸೂತ್ರಕರ್ತನಿಗೆ ॥



## ಕರುನಾಡ ಬನಶಂಕರಿಯ ಹಾಡು

ಕರುನಾಡ ನೆಲದಿ ನೆಲೆಸಿರುವ ಬನಶಂಕರಿ
ದಯಾಸಾಗರೀ ದಯಾಸಾಗರಿ ।
ನಿನ್ನಡಿಯ ಸನ್ನಿಧಿಗೆ ಶರಣು ಬಂದಿಹೆ ॥ಪ॥

ಶೂಲ ಖಡ್ಗ ಢಮರುವೇಣ ಸಿಂಹವಾಹಿನಿ
ಮೂರ್ತರೂಪ ಕಳಸವಾಸಿ ಅಭಯದಾಯಿನಿ
ಲೋಕಪಾವನೀ ಶಿವ ಸ್ವರೂಪಿಣಿ
ಬನಶಂಕರಿ ಕೃಪೆಯ ಕರುಣಿಸು ॥
ಕೃಪೆಯ ಕರುಣಿಸು ಕೃಪೆಯ ಕರುಣಿಸು ॥
ನಿನ್ನಡಿಯ ಸನ್ನಿಧಿಗೆ ಶರಣು ಬಂದಿಹೆ ॥1॥

ನಿನ್ನ ಸ್ಮರಣೆಯೊಂದೆ ಸಾಕು ನನ್ನ ಬಾಳಿಗೆ
ನಿನ್ನ ನಾಮ ಪುಣ್ಯ ತೀರ್ಥ ನನ್ನ ಪಾಲಿಗೆ
ಪಾಪ ನೀಗಿಸು ಸೇವೆ ಕರುಣಿಸು
ಬನಶಂಕರಿ ಕೃಪೆಯ ಕರುಣಿಸು
ಕೃಪೆಯ ಕರುಣಿಸು ಕೃಪೆಯ ಕರುಣಿಸು ॥
ನಿನ್ನಡಿಯ ಸನ್ನಿಧಿಗೆ ಶರಣು ಬಂದಿಹೆ ॥2॥

ಸಕಲ ಸುಖ ಸಂಪದವ ಕೊಡುವ ಸರ್ವೇಶ್ವರಿಯೇ
ಶುಭವ ಜಯವ ಕೊಡುವದಾತೆ ಆದಿಶಕ್ತಿಯೇ
ಕಷ್ಟ ನೀಗಿಸು ದಯವ ಪಾಲಿಸು
ಬನಶಂಕರಿ ಕೃಪೆಯ ಕರುಣಿಸು
ಕೃಪೆಯ ಕರುಣಿಸು ಕೃಪೆಯ ಕರುಣಿಸು
ನಿನ್ನಡಿಯ ಸನ್ನಿಧಿಗೆ ಶರಣು ಬಂದಿಹೆ ॥3॥

## ಬನಶಂಕರಿ ಮಹಿಮೆ

ಓಂ ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ
ಸರ್ವಮಂಗಲ ಸುಖದಾಯಿನಿ
ಸರ್ವಮಂಗಲ ಸುಖದಾಯಿನಿ
ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ ॥

ಶಂಖ ಚಕ್ರ ಗದಾಂಕುಶ ಪಾಣಿ
ಖಡ್ಗ ಶೂಲ ಢಮರು ಕಪಾಲೀ
ತಾರಾಗ್ರಹ ಮಂಡಲ ಮುಕುಟೆ
ರವಿ ತೇಜ ಪ್ರಭ ವದನೆ
ಓಂ ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ ॥

ಹರಿಹರ ಬ್ರಹ್ಮ ಸುರಾರ್ಚಿತೆ ಜನನಿ
ತ್ರೈಲೋಕ ಸುಪೂಜಿತೆ ಮಾತೆ
ವಾಣಿ ಭವಾನಿ ಲಕುಮಿ ಸಂಮಿಳಿತೆ
ಮಹಿಷಾಸುರ ಮರ್ಧಿನಿಯೇ
ಓಂ ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ ॥

ದೀನ ಜನಾಶ್ರಿತೆ ಆರ್ತರ ಸಖಿನೀ
ಅಮ್ಮ ಕರುಣಾಮಯಿ ಮಾಂಪಾಹಿ
ಆಡಂಬರ ಹಂಬಲಕೆ ನೀ ಮಣಿಯೆ
ನಿಜ ಭಕುತಿಗೆ ವರದಾತೆ
ಓಂ ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ ||

ನಿನ್ನಯ ಮಹಿಮೆಯ ಸ್ತುತಿಸಲು ಅರಿಯೆನು
ಬಲು ಪಾಮರನು ನಾನು
ಅಣುವಲಿ ಅಣುವಾಗಿರುವೆ ಘನತೆಗೆ ಘನತರವಾದೆ
ಜಗದೀಶ್ವರಿ ಜಗನ್ಮಾತೆ
ಓಂ ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ ||

ಓಂ ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ
ಸರ್ವಮಂಗಲ ಸುಖದಾಯಿನಿ
ಸರ್ವಮಂಗಲ ಸುಖದಾಯಿನಿ
ಬನಶಂಕರಿಯೇ ನಮಃ
ಓಂ ಬನಶಂಕರಿಯೇ ನಮಃ ||

—o—



**ಮಹರ್ಷಿ ದೇವಲ**

ಪರಮೇಶ್ವರನ ಫಾಲನೇತ್ರದಿಂದ ದೇವ ಮಾನವರ ಮಾನರಕ್ಷಣೆಗಾಗಿ
ವಸ್ತ್ರವನ್ನು ಸೃಷ್ಟಿಸಲು ಅವತರಿಸಿದ ಶ್ರೀ ದೇವಾಂಗ ಮಹರ್ಷಿ



ದೇವಾಂಗ ದೇವಲ ಮಹರ್ಷಿಯವರ ಬಿಚಾರವಾಗಿ ಈ ಹಿಂದೆಯೇ ಅನೇಕ ಮಹನೀಯರು ಹಲವಾರು ದೊಡ್ಡ ಕೃತಿಗಳನ್ನು ಹೊರತಂದಿದ್ದಾರೆ. ಆದರೆ ಅದು ಈಗಿನ ಜನಮಾನಕ್ಕೆ ತಲುಪಲು ನಾನಾ ಕಾರಣಗಳಿಂದ ಅಲಭ್ಯವಾಗಿದೆ. ಆದ್ದರಿಂದ ದೇವಾಂಗ ಪುರಾಣದ ತಾತ್ಪರ್ಯವನ್ನಾಧರಿಸಿದ ಒಂದು ಪುಟ್ಟ ಕೃತಿಯನ್ನು ಹೆಚ್ಚು ಜನರಿಗೆ ತಲುಪಿಸಬೇಕೆಂಬ ಆಶಯವು ನನ್ನನ್ನು ಬಹು ವರ್ಷಗಳಿಂದ ಕಾಡುತ್ತಲಿತ್ತು.

ಈ ನಿಟ್ಟಿನಲ್ಲಿ ದೇವಿಯ ಅನುಗ್ರಹದಿಂದ ಮಾಡಿದ ಪ್ರಯತ್ನವೇ ಈ ಕಿರು ಕೃತಿ ಹೊರಬರಲು ಕಾರಣವಾಯಿತು. ನನ್ನದು ಎಂಬ ಯಾವುದೇ ಹಮ್ಮು ಹೆಗ್ಗಳಿಕೆಗಳಿಲ್ಲದೆ ಈ ನುಡಿಕುಸುಮಗಳನ್ನು ದೇವಿಗೆ ಅರ್ಪಿಸಿದ್ದೇನೆ. ಆದರೆ ಅದು ದೇವಿಯವರ ಪಾದಾರವಿಂದಗಳಿಗಷ್ಟು ಮಾತ್ರವೇ ಅಲಂಕರಿಸಲು ನನ್ನ ಭಕ್ತಿಗೆ ಸಾಧ್ಯವಾಯಿತು. ಹಾಗಾಗಿ ಇದನ್ನು ಆಸ್ತಿಕ ಜನರೆಲ್ಲರಿಂದ ಓದಿಸಿ, ಹಾಡಿಸುವ ಮೂಲಕ ಈ ನುಡಿಕುಸುಮಗಳ ಒಂದು ಮಾಲೆಯನ್ನಾಗಿಸಿ ದೇವಿಯ ಮುಡಿಗೇರಿಸಿ ಅಲಂಕರಿಸ ಬೇಕೆಂಬುದು ನನ್ನ ಹೆಬ್ಬಯಕೆ. ಆದ್ದರಿಂದ ಈ ಭಗವದ್ ಕೈಂಕರ್ಯದಲ್ಲಿ ಭಾಗಿಯಾಗುವ ಎಲ್ಲಾ ಭಕ್ತ ಮಹಾಶಯರಿಗೂ ಈ ಪಾಮರಾಗ್ರನ ಪ್ರಣಾಮಗಳು.



ಕೆ. ಮಹಾದೇವ